## ಭಗವಾನ್ ಶ್ರೀರಮಣ ಮಹರ್ಷಿಗಳ

# ಉಪದೇಶಸಾರ




ಭುವಿ ವೇದಾಂತೈಕಶ್ರೇಷ್ಠರತ್ನ, ವೇದಾಂತಗಂಗಾಧರ ವಿದ್ವಾನ್

ಡಾ|| ಕೆ. ಜಿ. ಸುಬ್ರಾಯಶರ್ಮಾ




**"ವೇದಾಂತಚಕ್ರವರ್ತಿ"** ಡಾ॥ ಕೆ. ಜಿ. ಸುಬ್ರಾಯಶರ್ಮಾರವರ **"ಗುರುಶಿಷ್ಯಸಂಬಂಧ"**–60 ಕೃತಿರತ್ನವನ್ನು ಪೂಜ್ಯ ಶ್ರೀಶ್ರೀಸದಾನಂದಗಿರಿ ಸ್ವಾಮೀಜಿಯವರು ಲೋಕಾರ್ಪಣೆ ಮಾಡುತ್ತಿದ್ದಾರೆ; 18-4-2015, ಶನಿವಾರ




**ವೇದಶಾಸ್ತ್ರಪೋಷಿಣೀ ಸಭಾ ರಿ. ಮೈಸೂರು**–ಸಂಸ್ಥೆಯಿಂದ **ವಿದ್ವಾನ್ ಕೆ. ಜಿ. ಸುಬ್ರಾಯಶರ್ಮಾ** ಅವರಿಗೆ ಖ್ಯಾತಕಾದಂಬರೀಕಾರರಾದ, ಸುಪ್ರಸಿದ್ಧ ಸಾಹಿತಿಗಳಾದ **ಡಾ॥ ಎಸ್. ಎಲ್. ಭೈರಪ್ಪನವರಿಂದ** **"ಶಾಸ್ತ್ರವಿದ್ಯಾನಿಧಿ"** ಎಂಬ **ಗೌರವ ಸನ್ಮಾನ ಪ್ರಶಸ್ತಿಪ್ರದಾನ**; 8-3-2015, ಭಾನುವಾರ

ಆನಂದಗ್ರಂಥಮಾಲಾ–ಕುಸುಮ 62

# ಭಗವಾನ್ ಶ್ರೀರಮಣ ಮಹರ್ಷಿಗಳ

# ಉಪದೇಶಸಾರ

(ಮೂಲಶ್ಲೋಕ, ಪದಚ್ಛೇದ, ಅನ್ವಯ, ತಾತ್ಪರ್ಯಾರ್ಥ)


**ಪ್ರವಚನಕಾರರು ಮತ್ತು ಲೇಖಕರು**

ಅಧ್ಯಾತ್ಮವಿದ್ಯಾಪ್ರವೀಣ, ವೇದವಿದ್ಯಾಭೂಷಣ, ಅದ್ವೈತಜ್ಞಾನಸಿಂಧು, ವಿದ್ಯಾವಿಧಿನಿಧಿ,
ವೇದಶ್ರೀ, ವೇದಾಂತವಾರಿಧಿ, ವೇದಾಂತಭಾಸ್ಕರ, ವೇದಾಂತಸರಸ್ವತಿ, ವೇದಾಂತಕೇಸರಿ,
ವೇದಾಂತ ಸಾರ್ವಭೌಮ, ವೇದಾಂತಕಾಮಧೇನು, ವೇದಾಂತರಾಜಹಂಸ, ವಿವೇಕ ಭಾಸ್ಕರ,
ಶಾಸ್ತ್ರನಿಧಿ, ಅದ್ವೈತವೇದಾಂತಕೇಸರಿ, ಅದ್ವೈತಜ್ಞಾನತೇಜ, ವೇದಾಂತಸಾಗರ, ವೇದಾಂತರತ್ನ,
ಶಾಸ್ತ್ರವಿದ್ಯಾನಿಧಿ, ವೇದಾಂತಚಿಂತಾಮಣಿ, ಅದ್ವೈತಸಾರತಿಲಕ, ವೇದಾಂತಪ್ರಭಾಕರ,
ಅದ್ವೈತ ವೇದಾಂತವಾರಿಧಿ, ಅದ್ವೈತವೇದಾಂತಚೂಡಾಮಣಿ, ಅದ್ವೈತವೇದತಿಲಕ,
ಅದ್ವೈತ ವೇದಾಂತವಿಚಕ್ಷಣ, ವೇದಾಂತಸಾರತಿಲಕ, ವೇದಾಗಮವಿದ್ಯಾಸಾಗರ,
ಸುವರ್ಣಕರ್ನಾಟಕ ಕನ್ನಡಿಗ, ಭುವಿ ವೇದಾಂತೈಕಶ್ರೇಷ್ಠರತ್ನ, ರಾಷ್ಟ್ರರತ್ನ,
ಸುವರ್ಣಕರ್ನಾಟಕ ಸುವರ್ಣವೇದಾಂತಿ, ವೇದಾಂತರತ್ನಾಕರ, ಸ್ವರ್ಣಭೂಷಣ,
ವೇದಾಂತಗಂಗಾಧರ, ಅದ್ವೈತವೇದಾಂತವಾಚಸ್ಪತಿ, ಅದ್ವೈತವೇದಾಂತಶಿಖಾಮಣಿ,
ಗೋವಿಂದಲಕ್ಷ್ಮೀಪುರಸ್ಕಾರ, ಬಸವನಗುಡಿರತ್ನ, ಶ್ರೀ ಶ್ರೀ ಸದ್ಗುರುಹೃದಯಭಾಸ್ಕರ,
ಅದ್ವೈತವೇದಾಂತ ಸವ್ಯಸಾಚಿ, ಸದ್ಗುರು ಸೇವಾ ಧುರೀಣ, ಪರಿಪೂರ್ಣ ಮಹನೀಯ ೨೦೧೨,
ಮಂತ್ರಾಲಯದ ಶ್ರೀಶ್ರೀಸುಶಮೀಂದ್ರತೀರ್ಥಸ್ವಾಮೀಜಿ "ರಾಷ್ಟ್ರೀಯ ಜ್ಞಾನ ಪುರಸ್ಕಾರ",
ಅದ್ವೈತ ವೇದಾಂತ ಪ್ರತಿಭಾ ಪ್ರಕಾಶಃ, ಜಿಜ್ಞಾಸುಕಾಮಧೇನು, ಮುಮುಕ್ಷುಮೋಕ್ಷಧೇನು,
ಉಪನಿಷದ್ ರತ್ನಾಕರ, ಶ್ರೀ ಸಿದ್ಧಾರೂಢ ಸದ್ಭಾವನಾ ಪ್ರಶಸ್ತಿ, ವೇದಾಂತ ಪ್ರವಚನ ಚತುರ,
ವೇದಾಂತ ಪರುಷಮಣಿ, ಶಾಂಕರಾದ್ವೈತವೇದಾಂತಾಚಾರ್ಯ, ಅದ್ವೈತವೇದಾಂತಸಾರಥಿ,
**ಸುವರ್ಣ ಕರ್ನಾಟಕ "ರಾಜ್ಯೋತ್ಸವ ಪ್ರಶಸ್ತಿ"—೨೦೦೫**, ಮತ್ತು
**"ಸುವರ್ಣ ಕರ್ನಾಟಕ ಸಾಹಿತ್ಯ ಪ್ರಶಸ್ತಿ"** ಪುರಸ್ಕೃತ

**ವೇದಾಂತಚಕ್ರವರ್ತಿ, ಮಹಾಮಹೋಪಾಧ್ಯಾಯ ವೇ. ಬ್ರ. ಶ್ರೀ ವಿದ್ವಾನ್**

**ಡಾ|| ಕೆ. ಜಿ. ಸುಬ್ರಾಯಶರ್ಮಾ**, ಎಂ.ಎ., ಡಿ.ಲಿಟ್.

**(ಶ್ರೀಶ್ರೀಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳ ಅಂತೇವಾಸಿ ಸಾಕ್ಷಾತ್‌ಶಿಷ್ಯರು)**



ಪ್ರಕಾಶಕರು

**ಶ್ರೀ ನಿತ್ಯಾನಂದ ಪ್ರಕಾಶನ**

ಅಶೋಕನಗರ, ಬೆಂಗಳೂರು - 560 050

**ಜೂನ್ 2015**

**ಭಗವಾನ್ ಶ್ರೀರಮಣ ಮಹರ್ಷಿಗಳ ಉಪದೇಶಸಾರ–62**
**Bhagavan Sri Ramana Maharshigala Upadeshasaara** in Kannada
**62nd** Flower in the **'Aananda Grantha Maalaa'** Series
*by* Vedanta Chakravarthi, Mahaamahopaadhyaaya, Vidwan
**Dr. K. G. SUBRAYA SHARMA**, M.A., D.Litt.
# 127, **"Seetha-Preethi"**, Balaji Nagar,
ICICI Bank Cross Road, Uttarahalli Main Road
P. O. **Subrahmanyapura**, **Bengaluru - 560 061**
**Ph : 080-2639 6786 ; Mobile : 98862 81622**
e-mail: kgssharma@gmail.com

Published by
**Sri Nithyananda Prakashana**
No. 46, 4th Cross, Ashoknagar
Bengaluru - 560 050; Ph: 080 - 2242 6027

Pages: 48; **Price: Rs. 40/- ; ಬೆಲೆ: ರೂ. 40/-**

First Edition: **June 2015** ; **1000 Copies**

© All Rights Reserved by the **Author**
© ಈ ಗ್ರಂಥದ ಹಕ್ಕುಗಳೆಲ್ಲವೂ **ಲೇಖಕರಿಗೆ** ಸೇರಿವೆ.

**For Copies and other Books Please Contact**
**Vedanta Kesari, Mahaamahopaadhyaaya, Vidwan**
**Dr. K. G. SUBRAYA SHARMA, M.A., D.Litt.**
**# 127, "Seetha-Preethi", Balaji Nagar,**
**ICICI Bank Cross Rd., Uttarahalli Main Rd.**
**P. O. Subrahmanyapura, Bengaluru - 560 061**
**Ph: 080-2639 6786 ; Mobile: 98862 81622**
**e-mail: kgssharma@gmail.com**

Printed by
B. N. Nataraj
Sri Nithyananda Prakashana
# 46, 4th Cross, Ashoknagar, BSK 1st Stage
Bengaluru - 560 050. ✆ 2242 6027

# ನಮೋ ನಮಃ ಸದ್ಗುರುಪಾದುಕಾಭ್ಯಾಮ್

ಶ್ರೀಶಂಕರಭಗವತ್ಪಾದಾಚಾರ್ಯರ ಕೃತಿರತ್ನಗಳನ್ನೆಲ್ಲ ಕಸ್ತೂರಿಕನ್ನಡಭಾಷೆಗೆ ಅನುವಾದಮಾಡಿರುವ, **ಕನ್ನಡ ಶಂಕರ**ರೆಂದೇ ಪ್ರಸಿದ್ಧರಾಗಿರುವ, ನನ್ನ ಪ್ರೀತಿಯ ಸದ್ಗುರುಪುಂಗವರಾದ **ಶ್ರೀಶ್ರೀಸಚ್ಚಿದಾನಂದೇಂದ್ರ ಸರಸ್ವತೀಮಹಾಸ್ವಾಮಿಗಳವರಿಗೆ** ಮೊಟ್ಟಮೊದಲಿಗೆ ನನ್ನ ಭಕ್ತಿಪೂರ್ವಕ ಪ್ರಣಾಮಗಳು. ಶ್ರೀರಮಣಮಹರ್ಷಿಗಳನ್ನು ಭೌತಿಕರೂಪದಿಂದ ದರ್ಶನಮಾಡುವ ಸೌಭಾಗ್ಯವು ನನಗೆ ದೊರಕಲಿಲ್ಲ, ಆದರೆ ನನ್ನ ಸದ್ಗುರುಗಳಲ್ಲಿಯೇ ನಾನು ಶ್ರೀರಮಣರನ್ನು ಕಂಡಿರುತ್ತೇನೆ.

ಭಗವಾನ್ ಶ್ರೀರಮಣಮಹರ್ಷಿಗಳ ಜೀವನ ಸಂದೇಶಗಳನ್ನು ಕುರಿತು **"ಜೀವನ್ಮುಕ್ತ ಚತುಷ್ಟಯ"** (೨೦೦೯), **"ಸರಳ ರಮಣ"** (೨೦೧೨), **"ಶ್ರೀರಮಣಸುಧಾ"** (೨೦೧೩) ಎಂಬೀ ಗ್ರಂಥಗಳನ್ನು ಬರೆದ ಬಳಿಕ, ಇದೀಗ **"ಉಪದೇಶಸಾರ"**ವನ್ನೂ ಪದಚ್ಛೇದ, ಅನ್ವಯಾರ್ಥ, ತಾತ್ಪರ್ಯಗಳೊಂದಿಗೆ ಬರೆದು ಮುಮುಕ್ಷುಜಿಜ್ಞಾಸುಗಳ ಪಾದಾರವಿಂದಂಗಳಲ್ಲಿ ಭಕ್ತಿಯಿಂದ ಸಮರ್ಪಿಸುತ್ತಿದ್ದೇನೆ. ಶ್ರೀರಮಣರ ಉಪದೇಶಗಳು ಸಾರ್ವತ್ರಿಕ, ಸರಳ, ನೇರ ಹಾಗೂ ಧೀರ. ನಿಜವಾದ ಮುಮುಕ್ಷುಗಳಿಗೆ ಈ **ಉಪದೇಶಸಾರ**ವು ಮೋಕ್ಷಮಾರ್ಗಕ್ಕೆ ನೇರವಾದ ಸಾಧನವಾಗಿರುತ್ತದೆ. ಯಾವ ಶ್ರುತಿ ಸ್ಮೃತಿಗಳ ಮಂತ್ರಗಳನ್ನೂ ಉದಾಹರಿಸದೇ ಶ್ರೀರಮಣರು ತಮ್ಮ ಸ್ವಂತ ಅನುಭವದಿಂದಲೇ **ಉಪದೇಶಸಾರ**ವನ್ನು ಅನ್ವರ್ಥ **ಉಪದೇಶಸಾರ**ವನ್ನಾಗಿಸಿರುತ್ತಾರೆ. ಶ್ರೀ ರಮಣರ ಈ **ಉಪದೇಶಸಾರ**ವನ್ನು ಅರ್ಥಮಾಡಿಕೊಳ್ಳುತ್ತಾ ಹೋದರೆ ಅಂಥ ಅಧ್ಯಾತ್ಮ ಸಾಧಕರಿಗೆ ಶ್ರೀರಮಣರ ದರ್ಶನವೇ ಉಂಟಾಗುವುದರಲ್ಲಿ ಸಂಶಯವಿಲ್ಲ.

ಈಗ್ಗೆ ಸುಮಾರು ಇಪ್ಪತ್ತಮೂರು ವರ್ಷಗಳಿಂದಲೂ ಶ್ರೀ ರಮಣರ ಕೃತಿಗಳನ್ನು ಕುರಿತು ನೂರಾರು ಪ್ರವಚನಗಳನ್ನು ಮಾಡಿರುತ್ತೇನೆ, ಈಗಲೂ ಮಾಡುತ್ತಲೇ ಇದ್ದೇನೆ. ಶ್ರೀರಮಣರ ಭಕ್ತರುಗಳ ಹಾಗೂ ಶ್ರೋತೃಗಳ ಅಪೇಕ್ಷೆಯಂತೆ, ಹಾಗೂ ಶ್ರೀರಮಣರ ಸತ್‌ಪ್ರೇರಣೆಯಂತೆ ಮತ್ತು ನನ್ನ ಸದ್ಗುರುಗಳ ಅಂತಃಸಂಕಲ್ಪದಂತೆ ಇದೀಗ **"ಉಪದೇಶಸಾರ"** ಎಂಬೀ ಗ್ರಂಥವನ್ನು ಬರೆದು ಶ್ರೀರಮಣರ ಪವಿತ್ರಪಾದಾರವಿಂದಂಗಳಲ್ಲಿ ಭಕ್ತಿಯಿಂದ ಸಮರ್ಪಿಸಿರುತ್ತೇನೆ.

ಇದನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಸದ್ಗುರುಭಕ್ತರಾದ ಶ್ರೀ ಬಿ. ಎನ್. ನಟರಾಜರಿಗೂ, ಪ್ರೂಫ್ ಅನ್ನು ತಿದ್ದಿ ಸಹಕರಿಸಿರುವ ಸದ್ಗುರುಭಕ್ತರಿಗೂ ನನ್ನ ಧನ್ಯವಾದಗಳು. ಶ್ರೀರಮಣರ ಪಾದಾರವಿಂದಂಗಳಿಗೆ ಭಕ್ತಿಪ್ರಣಾಮಗಳು.

'ಮನ್ಮಥ'ಸಂವತ್ಸರದ ಜ್ಯೇಷ್ಠ ಶುದ್ಧ ಪೂರ್ಣಿಮಾ
2-6-2015, ಮಂಗಳವಾರ

**ಡಾ॥ ಕೆ. ಜಿ. ಸುಬ್ರಾಯಶರ್ಮಾ**
98862 81622; 2639 6786

# ಉಪದೇಶಸಾರ

ಇಪ್ಪತ್ತನೇ ಶತಮಾನದ **ದಕ್ಷಿಣಾಮೂರ್ತಿ**ಗಳೆಂದೇ ಜನಪ್ರಿಯರಾಗಿ ವಿಶ್ವ ವಿಖ್ಯಾತರಾಗಿದ್ದ **ಶ್ರೀರಮಣರ** ನೇರವಾದ ಉಪದೇಶಗಳೇ ಈ **ಉಪದೇಶಸಾರ.** ಭಗವಾನ್ ಶ್ರೀರಮಣಮಹರ್ಷಿಗಳು ಮೊಟ್ಟಮೊದಲಿಗೆ ತಮಿಳು ಭಾಷೆಯಲ್ಲಿ ಈ ಮೂವತ್ತು ಶ್ಲೋಕಗಳನ್ನು ರಚಿಸಿದರು. ಇವುಗಳು **'ಉಪದೇಶ ಉಂದಿಯಾರ್'** ಎಂದು ಪ್ರಸಿದ್ಧವಾಗಿದ್ದವು. ಅನಂತರ ಶ್ರೀರಮಣರೇ ಈ ಮೂವತ್ತು ಶ್ಲೋಕಗಳನ್ನೂ ತೆಲುಗು, ಸಂಸ್ಕೃತ ಮತ್ತು ಮಲೆಯಾಳಂ ಭಾಷೆ ಗಳಲ್ಲಿಯೂ ರಚಿಸಿ ಅದಕ್ಕೆ **ಉಪದೇಶಸಾರ** ಎಂದು ನಾಮಕರಣಮಾಡಿರುತ್ತಾರೆ. ಹೀಗಾಗಿ **ಸಂಸ್ಕೃತದಲ್ಲಿರುವ ಈ ಉಪದೇಶಸಾರವು ಭಗವಾನ್ ಶ್ರೀರಮಣ ಮಹರ್ಷಿಗಳ ನೇರವಾದ ಹಾಗೂ ಸರಳಸುಂದರವಾದ ಉಪದೇಶಗಳಾಗಿವೆ.**

ಶ್ರೀರಮಣರ ಉಪದೇಶಗಳನ್ನು ಕೇವಲ ಶಾಸ್ತ್ರಪಾಂಡಿತ್ಯದ ಬಲದಿಂದ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಇನ್ನು ಶ್ರೀರಮಣರ **ಉಪದೇಶಸಾರ**ವನ್ನು ವಿವರಿಸಿ ಹೇಳುವುದಂತೂ ಅಷ್ಟೊಂದು ಸುಲಭವೇನಲ್ಲ. ಇನ್ನು **ಉಪದೇಶಸಾರ** ವನ್ನು ಕುರಿತು ಪುಸ್ತಕರೂಪದಿಂದ ವ್ಯಾಖ್ಯಾನ ಮಾಡುವುದೆಂಬುದೂ ನಾವುಗಳು ತಿಳಿದಂತೆ ಸುಲಭವೇನಲ್ಲ. ಹಾಗೆಂದಮಾತ್ರಕ್ಕೆ ಯಾರಿಗೂ ಅರ್ಥವಾಗದ ಕಠಿನ, ಗಹನ ಭಾಷೆಯಲ್ಲಿ ಶ್ರೀರಮಣರು **ಉಪದೇಶಸಾರ**ವನ್ನು ರಚಿಸಿದ್ದಾರೆ ಎಂದಂತೂ ಅರ್ಥವಲ್ಲವೇ ಅಲ್ಲ. ಮತ್ತೇನೆಂದರೆ ಶ್ರೀರಮಣರ **ಉಪದೇಶಸಾರ**ವು ಅನುಭವ ವಾಣಿ, ಪ್ರಾಸಾದಿಕವಾಣಿ, ಅಮರವಾಣಿ ಹಾಗೂ ವೇದಾಂತವಾಣಿ!

ಶ್ರೀರಮಣರ ಅನುಗ್ರಹದಿಂದಲೇ, ಸಾಧಕರಿಗೆ ಶ್ರೀರಮಣರ ಉಪದೇಶ ಗಳು ಅರ್ಥವಾಗಬೇಕೇ ಹೊರತು ತಮ್ಮ ಸ್ವಂತ ಬುದ್ಧಿಯಿಂದಲ್ಲ. ಶ್ರೀಶಂಕರರ ಪ್ರಸ್ಥಾನತ್ರಯಭಾಷ್ಯಗ್ರಂಥಗಳನ್ನು ಪರಮಪೂಜ್ಯ ಶ್ರೀಶ್ರೀಸಚ್ಚಿದಾನಂದೇಂದ್ರ ಸರಸ್ವತೀ ಮಹಾಸ್ವಾಮಿಗಳಿಂದಲೇ (೧೯೫೯ ರಿಂದ ೧೯೭೫ ರ ವರೆಗೆ) ಸಂಪೂರ್ಣವಾಗಿ ಹಾಗೂ ತಲಸ್ಪರ್ಶಿಯಾಗಿ ಅಧ್ಯಯನಮಾಡಿರುವ ಸುಯೋಗ ನನ್ನದಾಗಿದೆ. ಸುಮಾರು ೧೯೫೯ ರಿಂದಲೂ ವೇದಾಂತ ಅಧ್ಯಯನ, ಅಧ್ಯಾಪನ, ಪ್ರವಚನ, ಉಪನ್ಯಾಸಗಳಲ್ಲಿಯೇ ನನ್ನ ಜೀವನವು ಈವರೆಗೂ ಇಂದಿಗೂ ಸಾಗುತ್ತಿರುವುದೂ ನನ್ನ ಸೌಭಾಗ್ಯ. ಶ್ರೀರಮಣರ **ಉಪದೇಶಸಾರ**ವನ್ನು ಕುರಿತ ಈ ಕೃತಿಯನ್ನು ಬರೆದು ಶ್ರೀರಮಣರ ಪಾದಾರವಿಂದಂಗಳಿಗೇ ಭಕ್ತಿಯಿಂದ ಸಮರ್ಪಿಸಿ ನಾನು ಕೃತಾರ್ಥನಾಗುತ್ತಿದ್ದೇನೆ. ನಮೋ ರಮಣಾಯ.

ತಾ || 4-6-2015, ಗುರುವಾರ — ಶ್ರೀರಮಣಚರಣಕಮಲಧೂಳಿಃ

ಬಾಲಾಜಿನಗರ, ಉತ್ತರಹಳ್ಳಿ, ಬೆಂ. 61 — **ಕೆ. ಜಿ. ಸುಬ್ರಾಯಶರ್ಮಾ**

# “ಭಗವಾನ್ ಶ್ರೀರಮಣ ಮಹರ್ಷಿಗಳ ಉಪದೇಶಸಾರ” ಅಂತರಂಗ

# 1. ಈಶ್ವರನೇ ಕರ್ಮಫಲದಾತೃ

ಕರ್ತುರಾಜ್ಞಯಾ ಪ್ರಾಪ್ಯತೇ ಫಲಮ್ ।
ಕರ್ಮ ಕಿಂ ಪರಂ ಕರ್ಮ ತಜ್ಜಡಮ್ ॥ ೧ ॥

**ಪದಚ್ಛೇದ:** ಕರ್ತುಃ ಆಜ್ಞಯಾ ಪ್ರಾಪ್ಯತೇ ಫಲಂ ಕರ್ಮ ಕಿಂ ಪರಂ ಕರ್ಮ ತತ್ ಜಡಮ್.

**ಅನ್ವಯ:** ಫಲಂ ಕರ್ತುಃ ಆಜ್ಞಯಾ ಪ್ರಾಪ್ಯತೇ, ಕರ್ಮ ಪರಂ ಕಿಮ್? ನ, ಯತಃ, ತತ್ ಕರ್ಮ ಜಡಮ್.

**ಅನ್ವಯಾರ್ಥ:** **ಫಲಂ** = ಕರ್ಮಫಲವು, **ಕರ್ತುಃ** = ಜಗತ್‌ಸೃಷ್ಟಿಕರ್ತನಾದ ಭಗವಂತನ, **ಆಜ್ಞಯಾ** = ಆಜ್ಞೆಯಿಂದಲೇ, **ಪ್ರಾಪ್ಯತೇ** = ಹೊಂದಲ್ಪಡುತ್ತದೆ. ಬರೀ ಕರ್ಮಗಳೇ ನಮಗೆ ಫಲಗಳನ್ನು ಕೊಡಲಾರವು. ಏಕೆಂದರೆ **ಕರ್ಮ** = ಆ ಕರ್ಮವು, **ಪರಂ** = ತಾನೇ ಫಲವನ್ನು ಕೊಡುವಷ್ಟು ಶ್ರೇಷ್ಠ ಹಾಗೂ ಸಮರ್ಥವಾದದ್ದು, **ಕಿಂ** = ಏನು? ಖಂಡಿತಾ ಅಲ್ಲ; ಏಕೆಂದರೆ, **ತತ್** = ಆ, **ಕರ್ಮ** = ಕರ್ಮವು, **ಜಡಮ್** = ಅಚೇತನವಾಗಿರುತ್ತದೆ.

**ತಾತ್ಪರ್ಯಾರ್ಥ:** ಮಾನವರು ಮಾಡುತ್ತಿರುವ ಕರ್ಮಗಳಿಗೆ ಫಲಗಳು ಉಂಟಾಗುತ್ತಿರುವುದು ದಿಟ; ಆದರೆ ಆ ಫಲಗಳು ಸರ್ವಜ್ಞನೂ ಸರ್ವಶಕ್ತನೂ ಆದ ಪರಮಾತ್ಮನ ಸಂಕಲ್ಪದಂತೆ, ಆಜ್ಞೆಯಿಂದ ಉಂಟಾಗುತ್ತಿವೆ. ಕರ್ಮಾಧ್ಯಕ್ಷನಾದ ಭಗವಂತನಿಲ್ಲದೇ ಹೋಗಿದ್ದರೆ ಆ ಕರ್ಮಗಳಿಂದ ಫಲಗಳೇ ಆಗುತ್ತಿರಲಿಲ್ಲ. ಭಗವಂತ, ಈಶ್ವರ, ಪರಮಾತ್ಮ, ದೇವರು, ಬ್ರಹ್ಮ, ಅತೀಂದ್ರಿಯತತ್ತ್ವ— ಇವೆಲ್ಲವೂ ಒಂದೇ. ಈಶ್ವರನ ಇಚ್ಛೆಯಿಂದಲೇ ಕರ್ಮಗಳಿಗೆ ತಕ್ಕ ಫಲಗಳು.

ಆಯಾ ತಮ್ಮ ತಮ್ಮ ಫಲಗಳನ್ನು ಕೊಡುವ ಸಾಮರ್ಥ್ಯವು ಕರ್ಮಗಳಿಗೇ ಇರಬಹುದಲ್ಲವೇ? ಕರ್ಮಗಳೇ ಪರಮಾತ್ಮನೆಂದು ಭಾವಿಸಬಹುದಲ್ಲವೇ? ಎಂದರೆ, ಸಾಧ್ಯವಿಲ್ಲ. ಕರ್ಮಗಳೇ ಪರಮಾತ್ಮನಲ್ಲ; ಏಕೆಂದರೆ ಕರ್ಮಗಳು ಜಡ. ಜಡವಾದ ಯಾವುದೇ ವಸ್ತುಗಳಿಗೂ ಸ್ವತಃ ಜ್ಞಾನವು ಇರುವುದಿಲ್ಲ. ಜಡವಾದ ಪದಾರ್ಥಗಳು ಯಾವುವೂ ತಾವು ತಾವಾಗಿಯೇ ಸುಖದುಃಖ ಫಲಗಳನ್ನು ಕೊಡಲಾರವು. ಆದ್ದರಿಂದ ಕರ್ಮಗಳಿಗಿಂತ ಭಿನ್ನನಾಗಿ ಕರ್ಮಫಲದಾತೃವಾದ ಈಶ್ವರನನ್ನು ಮಾನವರಾದ ನಾವು ಒಪ್ಪಿಕೊಳ್ಳಲೇಬೇಕು. ಅಧ್ಯಾತ್ಮ ಸಾಧಕರುಗಳು ಆಸ್ತಿಕರಾಗಿ ಈಶ್ವರಾರಾಧನೆಯನ್ನು ಮಾಡುತ್ತಾ ಇರಬೇಕು.

**ಕರ್ಮಗಳಿಗೆ ಭಗವಂತನೇ ಫಲದಾತೃ.**

## 2. ಕಾಮ್ಯಕರ್ಮಗಳು ಮೋಕ್ಷಕ್ಕೆ ಅಡ್ಡಿ

ಕೃತಿಮಹೋದಧೌ ಪತನಕಾರಣಮ್ ।
ಫಲಮಶಾಶ್ವತಂ ಗತಿನಿರೋಧಕಮ್ ॥ ೨ ॥

**ಪದಚ್ಛೇದ:** (ಕಾಮ್ಯಂ ಕರ್ಮ) ಕೃತಿಮಹೋದಧೌ ಪತನಕಾರಣಮ್, ಫಲಮ್ ಅಶಾಶ್ವತಂ ಗತಿನಿರೋಧಕಮ್.

**ಅನ್ವಯ:** (ಕಾಮ್ಯಂ ಕರ್ಮ) ಕೃತಿಮಹೋದಧೌ ಪತನಕಾರಣಮ್, ಫಲಮ್ ಅಶಾಶ್ವತಂ ಗತಿನಿರೋಧಕಮ್.

**ಅನ್ವಯಾರ್ಥ: ಕಾಮ್ಯಂ ಕರ್ಮ** = ಕಾಮನೆಯಿಂದ ಮಾಡುವ ಕರ್ಮವು, **ಕೃತಿಮಹಾ + ಉದಧೌ** = ಕರ್ಮಗಳೆಂಬ ದೊಡ್ಡ ಸಾಗರದಲ್ಲಿ, **ಪತನ ಕಾರಣಮ್** = ಬೀಳುವುದಕ್ಕೆ ಕಾರಣವಾಗುತ್ತದೆ. ಮತ್ತು, ಕಾಮ್ಯಕರ್ಮಗಳ, **ಫಲಂ** = ಫಲವು, **ಅಶಾಶ್ವತಮ್** = ಅನಿತ್ಯವಾದದ್ದು, ಮತ್ತು, **ಗತಿನಿರೋಧ ಕಮ್** = ಮೋಕ್ಷಮಾರ್ಗದ ಪ್ರಗತಿಗೆ ಅಡ್ಡಿಯೂ ಆಗಿಬಿಡುತ್ತದೆ.

**ತಾತ್ಪರ್ಯಾರ್ಥ:** ಇಲ್ಲಿ ಕರ್ಮಗಳೆಂದರೆ ಕಾಮ್ಯಕರ್ಮಗಳು. ಕಾಮಗಳಿಗಾಗಿ, ಇಷ್ಟಾರ್ಥಫಲಗಳನ್ನು ಹೊಂದುವುದಕ್ಕಾಗಿ ಮಾಡುವ ಕರ್ಮಗಳಿಗೆ **ಕಾಮ್ಯ ಕರ್ಮಗಳು** ಎಂದು ಹೆಸರು. ಈ ಕರ್ಮಗಳ ಉದ್ದೇಶವೆಲ್ಲ ಬರೀ ಕಾಮಗಳೇ. ಕಾಮ, ಕಾಮ, ಕಾಮ, ಕಾಮ; ಹೀಗೆ ಮನಸ್ಸಿನ ಭರ್ತಿ ಬರೀ ಆಸೆಗಳೇ ತುಂಬಿಕೊಂಡಿರುತ್ತವೆ. ಇಂಥ ಕಾಮ್ಯಕರ್ಮಗಳನ್ನೇ ಮಾಡುತ್ತಾ ಹೋದರೆ ಅದರಿಂದ ಮಾನವರು ಕರ್ಮಫಲಗಳೆಂಬ ಮಹಾಸಾಗರದಲ್ಲಿಯೇ ಬಿದ್ದು ಸಂಕಟಕ್ಕೆ ಗುರಿಯಾಗಿಬಿಡುತ್ತಾರೆ. ಕಾಮ್ಯಕರ್ಮ, ಫಲ; ಫಲಕ್ಕಾಗಿ ಕರ್ಮ—ಹೀಗೆ ಇದು ಸಂಸಾರಸಾಗರವೇ ಆಗಿರುತ್ತದೆ.

ಆಯಿತು, ಈ ಕಾಮ್ಯಕರ್ಮಗಳಿಂದ ಬರುವಂಥ ಫಲಗಳೇನು ಶಾಶ್ವತವೇ? ಎಂದರೆ, ಖಂಡಿತಾ ಅಲ್ಲ; ಮತ್ತೇನೆಂದರೆ, ಅನಿತ್ಯಫಲಗಳು. ಅನಿತ್ಯವಾದ ಕರ್ಮಗಳಿಂದ ಅನಿತ್ಯಫಲಗಳೇ ಆಗಬೇಕಲ್ಲವೇ? ಈ ಅನಿತ್ಯಫಲಗಳಿಂದಲೇ ಸಂತೃಪ್ತನಾಗಿಬಿಟ್ಟರೆ, ಅಂಥವನು ಅಧ್ಯಾತ್ಮದ ಮೋಕ್ಷಮಾರ್ಗದಲ್ಲಿ ಮುಂದುವರಿಯಲಾರನು. ಅಂದಮೇಲೆ, ಈ ಕಾಮ್ಯಕರ್ಮಗಳು, ಅವುಗಳ ಫಲಗಳು ಮೋಕ್ಷಮಾರ್ಗಕ್ಕೆ ಅಡ್ಡಿಯೇ ಆಗಿಬಿಡುತ್ತವೆಯಲ್ಲವೇ? ಕಾಮ್ಯಕರ್ಮಗಳಲ್ಲಿಯೇ ನಿರತರಾಗಿರುವವರಿಗೆ ಮೋಕ್ಷಪ್ರಾಪ್ತಿಯು ಆಗುವುದೇ ಇಲ್ಲ. ಮುಮುಕ್ಷು ಸಾಧಕರು ಕರ್ಮಯೋಗವನ್ನೇ ಮಾಡುತ್ತಿರಬೇಕು.

**ಮುಮುಕ್ಷುಗಳು ಕಾಮ್ಯಕರ್ಮಗಳನ್ನು ಬಿಟ್ಟುಬಿಡಬೇಕು.**

# 3. ಕರ್ಮಯೋಗವು ಮುಕ್ತಿಸಾಧನವು

ಈಶ್ವರಾರ್ಪಿತಂ ನೇಚ್ಛಯಾ ಕೃತಮ್ ।
ಚಿತ್ತಶೋಧಕಂ ಮುಕ್ತಿಸಾಧಕಮ್ ॥ ೩ ॥

**ಪದಚ್ಛೇದ:** ಈಶ್ವರಾರ್ಪಿತಂ ನ ಇಚ್ಛಯಾ ಕೃತಮ್, ಚಿತ್ತಶೋಧಕಂ ಮುಕ್ತಿಸಾಧಕಮ್.

**ಅನ್ವಯ:** ಈಶ್ವರಾರ್ಪಿತಂ ಕರ್ಮ ಇಚ್ಛಯಾ ನ ಕೃತಂ ಚೇತ್ ಚಿತ್ತಶೋಧಕಂ, ತೇನ ಮುಕ್ತಿಸಾಧಕಂ ಚ ಭವತಿ.

**ಅನ್ವಯಾರ್ಥ: ಈಶ್ವರಾರ್ಪಿತಂ** = ಈಶ್ವರನಿಗೆ ಅರ್ಪಿತವಾಗಲಿ ಎಂದು ಮಾಡಲ್ಪಟ್ಟ, **ಕರ್ಮ** = ಕರ್ಮವು, **ಇಚ್ಛಯಾ** = ಕಾಮದಿಂದ, **ನ ಕೃತಮ್** = ಮಾಡಲ್ಪಡದೇ ಹೋದರೆ, ಅಂಥ ಕರ್ಮವು, **ಚಿತ್ತಶೋಧಕಂ** = ಚಿತ್ತಶುದ್ಧಿಗೆ ಕಾರಣವಾಗುತ್ತದೆ, **ತೇನ** = ಅದರ ಮೂಲಕ, ಆ ಕರ್ಮವು **ಮುಕ್ತಿ ಸಾಧಕಮ್** = ಮುಕ್ತಿಗೆ ಸಾಧನವಾಗುತ್ತದೆ.

**ತಾತ್ಪರ್ಯಾರ್ಥ:** ಕರ್ಮಗಳೇ ಬಂಧಕರೂಪವಾದವುಗಳು, ಅದರಲ್ಲೂ ಕಾಮ್ಯಕರ್ಮಗಳಂತೂ ಸಂಸಾರಸಾಗರದಲ್ಲಿಯೇ ಮಾನವರನ್ನು ಮುಳುಗಿಸಿ ಬಿಡುತ್ತವೆ. ಆದರೆ ಅದೇ ಕರ್ಮಗಳನ್ನು ಭಗವದರ್ಪಣಬುದ್ಧಿಯಿಂದ ಹಾಗೂ ಕಾಮರಹಿತರಾಗಿ ಮಾಡಿದರೆ ಆ ಕರ್ಮಗಳಿಂದ ಸಾಧಕರಿಗೆ ಚಿತ್ತಶುದ್ಧಿಯು ಉಂಟಾಗುತ್ತದೆ. ಚಿತ್ತಶುದ್ಧಿಯು ಉಂಟಾಗಿಬಿಟ್ಟರೆ, ಅಂಥ ಮುಮುಕ್ಷುಸಾಧಕರಿಗೆ ಆತ್ಮಜ್ಞಾನವು ಉಂಟಾಗಿ ಅದರಿಂದ ಮೋಕ್ಷವೇ ದೊರಕಿಬಿಡುತ್ತದೆ.

ಕಾಮಗಳಿಗೆ ಸಿಕ್ಕಿಕೊಳ್ಳದೇ, ಅಂದರೆ ಯಾವ ಕಾಮನೆಗಳನ್ನೂ ಮಾಡಿ ಕೊಳ್ಳದೇ, 'ನಾನು ಮಾಡುತ್ತಿದ್ದೇನೆ' ಎಂಬ ಅಹಂಕಾರವನ್ನೂ ಬಿಟ್ಟು ಭಗವಂತ ನಿಗೆ ಸಮರ್ಪಣೆಯಾಗಲಿ ಎಂಬ ಸದ್ಭಾವನೆಯಿಂದ ಕರ್ಮಗಳನ್ನು ಮಾಡಿದರೆ ಅದಕ್ಕೇ **ಕರ್ಮಯೋಗ** ಎಂದು ಹೆಸರು. ಅಧ್ಯಾತ್ಮಸಾಧಕರು ಕಾಮ್ಯಕರ್ಮ ಗಳನ್ನೂ ನಿಷಿದ್ಧಕರ್ಮಗಳನ್ನೂ ಸಂಪೂರ್ಣವಾಗಿ ಕೈಬಿಟ್ಟು ಕರ್ಮಯೋಗವನ್ನೇ ಮಾಡಬೇಕು. ಕರ್ಮಯೋಗದಿಂದ ಚಿತ್ತಶುದ್ಧಿಯಾದವನಿಗೆ ಸದ್ಗುರೂಪದೇಶ ಶ್ರವಣದಿಂದ ಆತ್ಮಜ್ಞಾನವು ಉಂಟಾಗಿ, ಅದರಿಂದ ಮುಕ್ತಿಯೇ ದೊರಕುತ್ತದೆ. ಅಧ್ಯಾತ್ಮಸಾಧಕರು ಭಗವದ್ಭಕ್ತರಾಗಿ, ಚಿತ್ತಶುದ್ಧಿಯ ಮೂಲಕ ಬ್ರಹ್ಮಜ್ಞಾನವನ್ನು ಪಡೆದುಕೊಂಡು, ಅದರಿಂದ ಮುಕ್ತಿಯನ್ನು ಹೊಂದುತ್ತಾರೆ.

**ಮುಮುಕ್ಷುಗಳು ಕರ್ಮಯೋಗವನ್ನು ಮಾಡಬೇಕು.**

# 4. ಧ್ಯಾನವು ಉತ್ತಮಸಾಧನ

ಕಾಯವಾಙ್ಮನಃಕಾರ್ಯಮುತ್ತಮಮ್ ।
ಪೂಜನಂ ಜಪಶ್ಚಿಂತನಂ ಕ್ರಮಾತ್ ॥ ೪ ॥

**ಪದಚ್ಛೇದ:** ಕಾಯವಾಕ್‌ಮನಃಕಾರ್ಯಂ ಉತ್ತಮಂ ಪೂಜನಂ ಜಪಃ ಚಿಂತನಂ ಕ್ರಮಾತ್.

**ಅನ್ವಯ:** ಕಾಯವಾಕ್‌ಮನಃಕಾರ್ಯಂ ಪೂಜನಂ ಜಪಃ ಚಿಂತನಂ ಕ್ರಮಾತ್ ಉತ್ತಮಮ್.

**ಅನ್ವಯಾರ್ಥ: ಕಾಯ ವಾಕ್ ಮನಃ ಕಾರ್ಯಂ** = ಶರೀರ ವಾಕ್ಕು ಮನಸ್ಸಿನ ವ್ಯಾಪಾರಗಳಾದ, **ಪೂಜನಂ ಜಪಃ ಚಿಂತನಂ** = ಪೂಜೆ, ಜಪ ಮತ್ತು ಧ್ಯಾನಗಳು, **ಕ್ರಮಾತ್** = ಕ್ರಮವಾಗಿ, **ಉತ್ತಮಮ್** = ಒಂದಕ್ಕಿಂತ ಮತ್ತೊಂದು ಶ್ರೇಷ್ಠವಾದದ್ದು.

**ತಾತ್ಪರ್ಯಾರ್ಥ:** ಶರೀರದಿಂದ ಮಾಡುವ ಪೂಜೆಯು **ಶಾರೀರಿಕ** ಕರ್ಮ, ವಾಗಿಂದ್ರಿಯದಿಂದ ಮಾಡುವ ಜಪ ಪಾರಾಯಣಾದಿಗಳು **ವಾಚಿಕ** ತಪಸ್ಸು, ಇನ್ನು, ಮನಸ್ಸಿನಿಂದ ಮಾಡುವ ಧ್ಯಾನ, ಚಿಂತನಗಳು **ಮಾನಸಿಕ** ತಪಸ್ಸು. ಈ ಮೂರರಲ್ಲಿ ಶಾರೀರಿಕಪೂಜೆಗಿಂತ ವಾಚಿಕವಾದ ಜಪಪಾರಾಯಣಗಳೂ, ಇದಕ್ಕಿಂತಲೂ ಮಾನಸಿಕತಪಸ್ಸಾದ ಧ್ಯಾನಚಿಂತನಗಳೂ ಉತ್ತಮವಾಗಿರುತ್ತವೆ.

ಅಧ್ಯಾತ್ಮಸಾಧಕರೆಲ್ಲರೂ ಉತ್ತಮರೇ; ಇದರಲ್ಲಿ ಮೇಲು ಕೀಳು ಎಂಬ ಭಾವನೆಯು ಸರಿಯಲ್ಲ. ಏಕೆಂದರೆ ಎಲ್ಲರೂ ಅಧ್ಯಾತ್ಮಸಾಧಕರೇ ಅಲ್ಲವೇ? ಆದರೆ ಅವರವರ ಸಂಸ್ಕಾರಕ್ಕೆ ತಕ್ಕಂತೆ, ಅವರವರ ಅಧಿಕಾರಮಟ್ಟಕ್ಕೆ ತಕ್ಕಂತೆ ಶಾಸ್ತ್ರಗಳಲ್ಲಿ ಭಿನ್ನಭಿನ್ನ ಸಾಧನಗಳನ್ನು ಉಪದೇಶಿಸಿರುತ್ತಾರೆ. ಈ ಸಾಧನಗಳನ್ನೆಲ್ಲ ಒಟ್ಟುಗೂಡಿಸಿ ಇಲ್ಲಿ ಮೂರು ಭಾಗಗಳಾಗಿ ವಿಂಗಡಿಸಿರುತ್ತಾರೆ. ಅವುಗಳೇ ಶಾರೀರಿಕ, ವಾಚಿಕ, ಮಾನಸ—ತಪಸ್ಸು ಎಂದು ಪ್ರಸಿದ್ಧವಾಗಿರುತ್ತವೆ. ದೇಹ ದಿಂದ ಮಾಡುವ ಪೂಜೆ, ನಮಸ್ಕಾರ, ಅರ್ಚನೆಗಳಿಗೆ **ದೈಹಿಕ** ಸಾಧನಗಳೆಂದೂ; ವಾಗಿಂದ್ರಿಯದಿಂದ ಮಾಡುವ ಜಪ, ಪಾರಾಯಣಾದಿಗಳಿಗೆ **ವಾಚಿಕ** ಸಾಧನ ಗಳೆಂದೂ; ಮನಸ್ಸಿನಿಂದ ಮಾಡುವ ವಿಚಾರ, ಧ್ಯಾನಗಳಿಗೆ **ಮಾನಸ** ತಪಸ್ಸೆಂದೂ ಹೆಸರು. ಈ ಮೂರೂ ಸಾಧನಗಳು ಮೋಕ್ಷಪ್ರಾಪ್ತಿಗೆ ಪರಂಪರಾ ಸಾಧನಗಳೇ ಹೌದು. ಎಲ್ಲವೂ ಚಿತ್ತಶುದ್ಧಿಗೆ ಸಾಧನಗಳೇ; ಆದರೆ, ಇವುಗಳಲ್ಲಿ **ಮಾನಸ** ತಪಸ್ಸು ಅತ್ಯಂತ ಉತ್ತಮವಾದದ್ದು.

**ಮುಮುಕ್ಷುಗಳು ಮಾನಸ ತಪಸ್ಸನ್ನೇ ಮಾಡಬೇಕು.**

# 5. ಇದೇ, ನಿಜವಾದ ದೇವಪೂಜಾ

ಜಗತ ಈಶಧೀಯುಕ್ತಸೇವನಮ್ ।
ಅಷ್ಟಮೂರ್ತಿಭೃದ್ ದೇವಪೂಜನಮ್ ॥ ೫ ॥

**ಪದಚ್ಛೇದ:** ಜಗತಃ ಈಶಧೀಯುಕ್ತಸೇವನಂ ಅಷ್ಟಮೂರ್ತಿಭೃತ್‌ದೇವ ಪೂಜನಮ್.

**ಅನ್ವಯ:** ಜಗತಃ ಈಶಧೀಯುಕ್ತಸೇವನಂ ಅಷ್ಟಮೂರ್ತಿಭೃದ್‌ದೇವ ಪೂಜನಂ ಭವತಿ.

**ಅನ್ವಯಾರ್ಥ: ಜಗತಃ** = ಜಗತ್ತನ್ನು, **ಈಶಧೀ ಯುಕ್ತ ಸೇವನಂ** = ಈಶ್ವರನೆಂಬ ಬುದ್ಧಿಯಿಂದ ಕೂಡಿಕೊಂಡು ಸೇವಿಸುವುದು ಎಂಬುದು, **ಅಷ್ಟ ಮೂರ್ತಿಭೃತ್ ದೇವಪೂಜನಂ** = ಅಷ್ಟಮೂರ್ತಿಗಳನ್ನು ಭರಿಸಿರುವ ದೇವನ ಪೂಜೆಯೇ ಆಗುತ್ತದೆ.

**ತಾತ್ಪರ್ಯಾರ್ಥ:** ಅಜ್ಞಾನಿಗಳಿಗೆ ನಾಮರೂಪಾತ್ಮಕವಾದ ಈ ಜಗತ್ತು ತೋರುತ್ತಿದೆ. ದಿಟ, ಆದರೆ ಈ ಜಗತ್ತು ಪರಮಾತ್ಮನಿಗಿಂತ ಭಿನ್ನವಾಗಿಲ್ಲ , ಇದು ಪರಮಾತ್ಮನೇ ಆಗಿದೆ ಎಂದು ತಿಳಿದು ಈ ವಿಶ್ವವನ್ನು ನೋಡಿದಾಗ ಇದೇ ಈಶ್ವರನ ಪೂಜೆಯಾಗುತ್ತದೆ. ಈಶ್ವರನು ಎಂಟು ಮೂರ್ತಿಗಳ ರೂಪದಿಂದ ತೋರುತ್ತಿದ್ದಾನೆಂದು ಶಾಸ್ತ್ರಗಳು ಹೇಳುತ್ತಿವೆ. ಪರಮಾತ್ಮನೊಬ್ಬನೇ ಈ ಪ್ರಪಂಚ ರೂಪದಿಂದ ತೋರುತ್ತಿದ್ದಾನೆ ಎಂದು ಭಾವಿಸಿದರೆ, ಆಗ ಸಾಧಕನು ಏನೇ ಕೆಲಸವನ್ನು ಮಾಡಿದರೂ, ಏನನ್ನೇ ನೋಡಿದರೂ ಅದೆಲ್ಲವೂ ಭಗವಂತನ ಪೂಜೆಯೇ ಆಗಿಬಿಡುತ್ತದೆ.

ಭಗವಂತನ ಅಷ್ಟಮೂರ್ತಿಗಳೆಂದರೆ: ಪೃಥಿವೀ, ಅಪ್ಪು, ತೇಜಸ್ಸು, ವಾಯು, ಆಕಾಶ, ಸೂರ್ಯ, ಚಂದ್ರ ಮತ್ತು ಜೀವರುಗಳು. ಈ ಎಂಟೂ ರೂಪಗಳಿಂದ ತೋರುತ್ತಿರುವವನು ಈಶ್ವರನೇ ಎಂದು ಭಾವಿಸಬೇಕು. ನಾಮ ರೂಪಕ್ರಿಯೆಗಳಿಂದ ಭಿನ್ನಭಿನ್ನವಾಗಿ ತೋರುತ್ತಿರುವ ಈ ವಿಶ್ವವು ಪರಮಾತ್ಮನ ಕಾರ್ಯವೇ ಆಗಿರುತ್ತದೆ. ಈ ವಿಶ್ವವೆಲ್ಲವೂ ಈ ಎಂಟು ರೂಪಗಳಿಗಿಂತ ಭಿನ್ನ ವಾಗಿಲ್ಲವೇ ಇಲ್ಲ. ಹೀಗೆಂದು ತಿಳಿದು **ಜಗತಃ ಸೇವನಂ,** ಜಗತ್ತನ್ನು ಅನುಭವಿಸಿ ದಾಗ ಅದೂ ಈಶ್ವರನ ಪೂಜೆಯೇ ಆಗಿಬಿಡುತ್ತದೆಯಲ್ಲವೇ? ಪ್ರಾರಂಭದ ಹಂತದ ಅಧ್ಯಾತ್ಮಸಾಧಕರಿಗೆ ಇದೇ ಶಾರೀರಿಕಪೂಜೆಯು ಎಂದಾಗುತ್ತದೆ.

**ಈಶ್ವರನ ದೃಷ್ಟಿಯಿಂದಲೇ ಜಗತ್ತನ್ನು ನೋಡಬೇಕು.**

# 6. ಮಾನಸ ಜಪಧ್ಯಾನಗಳು ಶ್ರೇಷ್ಠ

ಉತ್ತಮಸ್ತವಾದುಚ್ಚಮಂದತಃ।
ಚಿತ್ತಜಂ ಜಪಧ್ಯಾನಮುತ್ತಮಮ್ ॥ ೬ ॥

**ಪದಚ್ಛೇದ:** ಉತ್ತಮಸ್ತವಾತ್ ಉಚ್ಚಮಂದತಃ ಚಿತ್ತಜಂ ಜಪಧ್ಯಾನಮ್ ಉತ್ತಮಮ್.

**ಅನ್ವಯ:** ಉತ್ತಮಸ್ತವಾತ್ ಉಚ್ಚಮಂದತಃ ಚಿತ್ತಜಂ ಜಪಧ್ಯಾನಮ್ ಉತ್ತಮಮ್.

**ಅನ್ವಯಾರ್ಥ: ಉತ್ತಮಸ್ತವಾತ್** = ಉತ್ತಮವಾದ ಸ್ತೋತ್ರಪಾರಾಯಣಕ್ಕಿಂತಲೂ, **ಉಚ್ಚಮಂದತಃ ಜಪಾತ್** = ಗಟ್ಟಿಯಾಗಿ ಹಾಗೂ ಮೆಲ್ಲಗೆ ಜಪ ಮಾಡುವುದಕ್ಕಿಂತಲೂ, **ಚಿತ್ತಜಂ** = ಮನಸ್ಸಿನಿಂದ ಮಾಡುವಂಥ, **ಜಪಧ್ಯಾನಮ್** = ಜಪ ಮತ್ತು ಧ್ಯಾನವು, **ಉತ್ತಮಮ್** = ಉತ್ತಮವಾದದ್ದು.

**ತಾತ್ಪರ್ಯಾರ್ಥ:** ಪುರಾಣಗಳಲ್ಲಿ ಭಗವಂತನ ನೂರಾರು ಸ್ತೋತ್ರಗಳಿರುತ್ತವೆ. ಋಷಿಗಳು, ತಪಸ್ವಿಗಳು, ಪಂಡಿತೋತ್ತಮರುಗಳು, ದೇವತೆಗಳು— ಭಗವಂತನನ್ನು ನಾನಾರೀತಿಗಳಿಂದ ಸ್ತುತಿಸಿರುತ್ತಾರೆ. ಇವೆಲ್ಲವೂ ಆರ್ಷ ಹಾಗೂ ಪೌರಾಣಿಕ ಸ್ತೋತ್ರಗಳಾದ್ದರಿಂದ ಅತ್ಯಂತ ಶ್ರೇಷ್ಠವಾದವುಗಳೇ ಆಗಿರುತ್ತವೆ. ಇವುಗಳ ಪಾರಾಯಣದಿಂದ ಇಷ್ಟಫಲಗಳು ಉಂಟಾಗುತ್ತವೆ. ಇನ್ನು ಜಪಾನುಷ್ಠಾನ; ಗಟ್ಟಿಯಾಗಿ ಜಪಮಾಡುವುದು, ಇದಕ್ಕೆ **ವೈಖರೀ**ಜಪ ಎಂದು ಹೆಸರು; ಮೆಲ್ಲಗೆ ಜಪಮಾಡುವುದು, ಇದಕ್ಕೆ **ಉಪಾಂಶು** ಎಂದು ಹೆಸರು. ಇವೆರಡೂ ಉತ್ತಮ ಸಾಧನಗಳೇ ಹೌದು.

ಆದರೆ ಇವೆರಡಕ್ಕಿಂತಲೂ ಮಾನಸಜಪ ಮತ್ತು ಧ್ಯಾನಗಳು ಇನ್ನೂ ಶ್ರೇಷ್ಠವಾದವುಗಳು. ಇದೇ ಮಾನಸ ಜಪ ಮತ್ತು ಮಾನಸ ಧ್ಯಾನ. ಬಾಹ್ಯವಾದ ಜಪವನ್ನು ವಾಗಿಂದ್ರಿಯದಿಂದ ಎಲ್ಲರೂ ಮಾಡಬಹುದು. ಏಕೆಂದರೆ ಆ ಬಾಹ್ಯಜಪವೆಂಬುದು ಅತ್ಯಂತ ಸುಲಭ ಸಾಧನ. ಆದರೆ ಶುದ್ಧಮನಸ್ಸಿನಿಂದ, ಏಕಾಗ್ರಮನಸ್ಸಿನಿಂದ, ಶಾಂತಮನಸ್ಸಿನಿಂದ ಜಪವನ್ನೂ ಧ್ಯಾನವನ್ನೂ ಮಾಡುವುದು ಎಂಬುದು ಉತ್ತಮಸಾಧಕರಿಗೆ ಮಾತ್ರ ಸಾಧ್ಯವಾಗುತ್ತದೆ. ಆದ್ದರಿಂದ ಅಧ್ಯಾತ್ಮಸಾಧಕರು ಮಾನಸ ಜಪಧ್ಯಾನಗಳನ್ನೇ ಅನುಷ್ಠಾನ ಮಾಡಬೇಕು. ಪರಮಾತ್ಮನನ್ನು ಕುರಿತ ಮಾನಸ ಜಪ ಹಾಗೂ ಧ್ಯಾನದಿಂದ ಮೋಕ್ಷಮಾರ್ಗಕ್ಕೆ ಸಹಾಯವಾಗುತ್ತದೆ.

**ಮುಮುಕ್ಷುಗಳು ಮಾನಸ ಜಪ ಧ್ಯಾನಗಳನ್ನು ಮಾಡಬೇಕು.**

# 7. ಅಖಂಡಧ್ಯಾನಕ್ಕೆ ಎರಡು ದೃಷ್ಟಾಂತಗಳು

ಆಜ್ಯಧಾರಯಾ ಸ್ರೋತಸಾ ಸಮಮ್ ।
ಸರಲಚಿಂತನಂ ವಿರಲತಃ ಪರಮ್ ॥ ೭ ॥

**ಪದಚ್ಛೇದ:** ಆಜ್ಯಧಾರಯಾ ಸ್ರೋತಸಾ ಸಮಂ ಸರಲಚಿಂತನಂ ವಿರಲತಃ ಪರಮ್.

**ಅನ್ವಯ:** ಆಜ್ಯಧಾರಯಾ ಸಮಂ, ಸ್ರೋತಸಾ ಸಮಂ ಸರಲಚಿಂತನಂ ವಿರಲತಃ ಧ್ಯಾನಾತ್ ಪರಮ್.

**ಅನ್ವಯಾರ್ಥ: ಆಜ್ಯಧಾರಯಾ ಸಮಂ** = ಕರಗಿಸಿದ ದ್ರವರೂಪದ ತುಪ್ಪದ ಧಾರೆಗೆ ಸಮಾನವಾಗಿರುವಂಥ, ಮತ್ತು **ಸ್ರೋತಸಾ ಸಮಂ** = ನದಿಗಳ ಪ್ರವಾಹದಂತಿರುವ, **ಸರಲಚಿಂತನಂ** = ಸರಳವಾದ ಹಾಗೂ ಸಹಜವಾದ ಧ್ಯಾನವು, **ವಿರಲತಃ ಧ್ಯಾನಾತ್** = ವಿರಲವಾದ ಖಂಡಖಂಡವಾದ ಧ್ಯಾನಕ್ಕಿಂತಲೂ, **ಪರಮ್** = ಶ್ರೇಷ್ಠವಾದದ್ದು.

**ತಾತ್ಪರ್ಯಾರ್ಥ:** ಮುಮುಕ್ಷುಸಾಧಕರು ಅಖಂಡ ಹಾಗೂ ಸಹಜವಾದ ಧ್ಯಾನವನ್ನೇ ಮಾಡಬೇಕು. ಧ್ಯಾನವೆಂದರೆ ಶುದ್ಧಮನಸ್ಸಿನಿಂದ ಏಕಾಗ್ರತೆಯಿಂದ ನೈರಂತರ್ಯದಿಂದ ತನ್ನ ಪರಮಾರ್ಥಸ್ವರೂಪವನ್ನೇ ಸಹಜವಾಗಿ ಚಿಂತನ ಮಾಡುವ ಉತ್ತಮ ಸಾಧನ. ಇದು ಉತ್ತಮಾಧಿಕಾರಿಗಳಿಗೆ ಸಾಧ್ಯ. ಈ ಧ್ಯಾನದಲ್ಲಿ ಪ್ರಯತ್ನವಾಗಲೀ ವಿಕ್ಷೇಪವಾಗಲೀ ಇರಬಾರದು. ಇದಕ್ಕೆ ಎರಡು ಸುಂದರವಾದ ಉದಾಹರಣೆಗಳು: ಒಂದು ಆಜ್ಯಧಾರೆ, ಮತ್ತೊಂದು ನದೀ ಪ್ರವಾಹ. ಆಜ್ಯದ ಎಂದರೆ ಕರಗಿನೀರಾಗಿರುವ ತುಪ್ಪವನ್ನು ಪೂರ್ಣಾಹುತಿಯಾಗಿ ಅಗ್ನಿಗೆ ಸಮರ್ಪಿಸುವಾಗ ಅದರ ಧಾರೆಯು ಸಂತತವಾಗಿರುತ್ತದೆಯಲ್ಲವೇ? ಆಜ್ಯಧಾರೆಯಂತೆ ಈಶ್ವರಧ್ಯಾನವೂ ಸಂತತವಾಗಿ ಅಖಂಡವಾಗಿರಬೇಕು.

ಇನ್ನೊಂದು, ನದೀಪ್ರವಾಹದ ದೃಷ್ಟಾಂತ: ನದಿಯ ನೀರಿನ ಪ್ರವಾಹವು ಸಹಜವಾಗಿ ಪ್ರಯತ್ನವೇ ಇಲ್ಲದೆ ಸಮುದ್ರದ ಕಡೆಗೇ ಯಾವಾಗಲೂ ಹರಿಯುತ್ತಿರುವಂತೆ ಪರಮಾತ್ಮನ ಧ್ಯಾನವೂ ಸಹಜವಾಗಿ ಅಪ್ರಯತ್ನದಿಂದ ಅಖಂಡವಾಗಿ ಹರಿಯುತ್ತಿರಬೇಕು. ಇದೇ ಸರಲಧ್ಯಾನವು, ಸಹಜ ಹಾಗೂ ಅಖಂಡಧ್ಯಾನವು. ಇದು ಖಂಡಖಂಡವಾದ, ತುಂಡುತುಂಡಾದ ಪ್ರಯತ್ನಪೂರ್ವಕವಾದ ವಿರಲ ಧ್ಯಾನಕ್ಕಿಂತಲೂ ಅತ್ಯಂತ ಶ್ರೇಷ್ಠವಾದದ್ದು.

**ಮುಮುಕ್ಷುಗಳು ಅಖಂಡಧ್ಯಾನವನ್ನೇ ಮಾಡಬೇಕು.**

# 8. ಭೇದಧ್ಯಾನಕ್ಕಿಂತ ಅಭೇದಧ್ಯಾನವೇ ಶ್ರೇಷ್ಠ

ಭೇದಭಾವನಾತ್ ಸೋಽಹಮಿತ್ಯಸೌ ।
ಭಾವನಾಽಭಿದಾ ಪಾವನೀ ಮತಾ ॥ ೮ ॥

**ಪದಚ್ಛೇದ:** ಭೇದಭಾವನಾತ್ ಸಃ ಅಹಮ್ ಇತಿ ಅಸೌ ಭಾವನಾ ಅಭಿದಾ ಪಾವನೀ ಮತಾ.

**ಅನ್ವಯ:** ಭೇದಭಾವನಾತ್ 'ಸೋಽಹಮ್' ಇತಿ ಅಸೌ ಅಭಿದಾ ಭಾವನಾ ಪಾವನೀ ಮತಾ.

**ಅನ್ವಯಾರ್ಥ: ಭೇದಭಾವನಾತ್** = ಭೇದಬುದ್ಧಿಯಿಂದ ಮಾಡುವಂಥ ಧ್ಯಾನಕ್ಕಿಂತಲೂ, **'ಸೋಽಹಮ್' ಇತಿ ಅಸೌ** = ಆ ಪರಮಾತ್ಮನೇ ನಾನು ಎಂಬ ಈ, **ಅಭಿದಾ** = ಭೇದವಿಲ್ಲದ, **ಭಾವನಾ** = ಭಾವನೆಯು, ಎಂದರೆ ಧ್ಯಾನವು, **ಪಾವನೀ** = ಪವಿತ್ರವಾದದ್ದು, **ಮತಾ** = ಎಂದು ತಿಳಿಯಬೇಕು.

**ತಾತ್ಪರ್ಯಾರ್ಥ:** ಧ್ಯಾನದಲ್ಲಿ ಸಗುಣ ಧ್ಯಾನವೆಂದೂ ನಿರ್ಗುಣ ಧ್ಯಾನವೆಂದೂ ಎರಡು ವಿಧ. ಭೇದಭಾವನೆಯೆಂದರೆ ನಾನು ಬೇರೆ, ಭಗವಂತನು ಬೇರೆ ಎಂಬ ದ್ವೈತದೃಷ್ಟಿಯು. ಧ್ಯಾತೃ ಧ್ಯಾನ ಧ್ಯೇಯಗಳೆಂಬ ತ್ರಿಪುಟಿಯಿಂದ ಕೂಡಿದ ಧ್ಯಾನಕ್ಕೆ ದ್ವೈತಧ್ಯಾನ, ಸಗುಣಧ್ಯಾನ, ಭೇದಧ್ಯಾನ— ಎಂದೆಲ್ಲಾ ಹೆಸರುಗಳು. ಭಗವಂತನಿಗೂ ತನಗೂ ಭೇದವನ್ನೇ ಇಟ್ಟುಕೊಂಡು ಮಾಡುವ ಮಂದಮಧ್ಯಮಾಧಿಕಾರಿಗಳ ಸಾಮಾನ್ಯಧ್ಯಾನವಿದು!

ಆದರೆ ಇದಕ್ಕಿಂತಲೂ ಶ್ರೇಷ್ಠವಾದ ಉತ್ತಮವಾದ ಹಾಗೂ ಪವಿತ್ರವಾದ ಮತ್ತೊಂದು ಧ್ಯಾನವಿದೆ. ಅದೇ **ಸೋಽಹಂ** ಎಂಬ ಧ್ಯಾನವು. **ಸಃ** ಎಂದರೆ ಉಪನಿಷತ್‌ಪ್ರತಿಪಾದ್ಯನಾದ ಆ ಪರಮಾತ್ಮನೇ, **ಅಹಂ** ಎಂದರೆ ನಾನು ಎಂಬ ಭಾವನೆಯು. ಇಲ್ಲಿ **ಸೋಽಹಂ** ಎಂದರೆ **ಅಹಂ ಬ್ರಹ್ಮಾಸ್ಮಿ** ಎಂಬ **ಅಭಿದಾ ಭಾವನಾ,** ಭೇದವಿಲ್ಲದ ಧ್ಯಾನವು; ಅವನೇ ನಾನು, ನಾನೇ ಅವನು; ನನಗೂ ಆ ಭಗವಂತನಿಗೂ ಯಾವ ಭೇದವೂ ಇಲ್ಲ ಎಂದು ಧ್ಯಾನಮಾಡುವುದೇ ಉತ್ತಮಭಾವನೆಯು. ಈ ಧ್ಯಾನವು ಒಂದು ದಿನದಲ್ಲಿ ಎರಡು, ಮೂರು, ನಾಲ್ಕು ಗಂಟೆಗಳ ಕಾಲ, ಕೂತುಕೊಂಡು ಮಾಡುವುದಲ್ಲ. ಮತ್ತೇನೆಂದರೆ ಇದು ಸಹಜಧ್ಯಾನವು. ನಿಜವಾಗಿ ನೋಡಿದರೆ ಇದು ಆತ್ಮಜ್ಞಾನನಿಷ್ಠೆಯೇ ಆಗಿರುತ್ತದೆ. ವಿವೇಕದಿಂದ ಹಾಗೂ ವಿಚಾರದಿಂದ ಮಾಡುವ ಧ್ಯಾನವಿದು. ಉತ್ತಮಾಧಿಕಾರಿಗಳಾದ ಮುಮುಕ್ಷುಸಾಧಕರಿಗೆ ಈ ಸಹಜಧ್ಯಾನವೇ ಶ್ರೇಷ್ಠವಾದದ್ದು.

**ಅಭೇದಧ್ಯಾನವನ್ನೇ ಸಾಧಕರು ಮಾಡಬೇಕು.**

# 9. ಇದೇ ಉತ್ತಮವಾದ ಭಕ್ತಿಯು

ಭಾವಶೂನ್ಯಸದ್ಭಾವಸುಸ್ಥಿತಿಃ।
ಭಾವನಾಬಲಾತ್ ಭಕ್ತಿರುತ್ತಮಾ ॥ ೯ ॥

**ಪದಚ್ಛೇದ:** ಭಾವಶೂನ್ಯಸದ್ಭಾವಸುಸ್ಥಿತಿಃ ಭಾವನಾಬಲಾತ್ ಭಕ್ತಿಃ ಉತ್ತಮಾ.

**ಅನ್ವಯ:** ಭಾವನಾಬಲಾತ್ ಭಾವಶೂನ್ಯಸದ್ಭಾವಸುಸ್ಥಿತಿಃ ಉತ್ತಮಾ ಭಕ್ತಿಃ.

**ಅನ್ವಯಾರ್ಥ: ಭಾವನಾಬಲಾತ್** = **ಸೋಽಹಮ್** ಎಂಬೀ ಭಾವನೆಯ ಬಲದಿಂದ, **ಭಾವಶೂನ್ಯಸದ್ಭಾವಸುಸ್ಥಿತಿಃ** = ಭಾವನಾರಹಿತವಾದ ಸದ್ಭಾವದಲ್ಲಿ ಎಂದರೆ ಪರಿಶುದ್ಧವಾದ ಕೇವಲ ಅರಿವಿನಲ್ಲಿ ಸಂಪೂರ್ಣವಾಗಿ ನೆಲೆಗೊಳ್ಳುವುದೇ, **ಉತ್ತಮಾ** = ಉತ್ತಮವಾದ, **ಭಕ್ತಿಃ** = ಭಕ್ತಿಯು.

**ತಾತ್ಪರ್ಯಾರ್ಥ:** ಮೊದಲನೆಯ ಹಂತದಲ್ಲಿ ನಾನು ಬೇರೆ, ಭಗವಂತನು ಬೇರೆ ಎಂಬ ಭೇದದ ಧ್ಯಾನವೇ ಶ್ರೇಷ್ಠ. ನಾನು ಸಣ್ಣವನು, ಭಗವಂತನು ದೊಡ್ಡವನು; ನಾನು ದಾಸ, ಭಗವಂತನು ಈಶ; ನಾನು ಅಲ್ಪಜ್ಞ, ಭಗವಂತನು ಸರ್ವಜ್ಞ; ನಾನು ಸಂಸಾರಿಯಾದ ಜೀವಾತ್ಮ, ಭಗವಂತನು ಅಸಂಸಾರಿಯಾದ ಪರಮಾತ್ಮ—ಎಂಬ ದ್ವೈತಬುದ್ಧಿಯಿಂದಲೇ ಧ್ಯಾನವು ಪ್ರಾರಂಭವಾಗಬೇಕು.

ಅನಂತರ, ಈ ಭೇದಧ್ಯಾನದಿಂದ ಅಭೇದಧ್ಯಾನವನ್ನು ಅನುಷ್ಠಾನಮಾಡಬೇಕು. ಇಲ್ಲಿ 'ಸೋಽಹಂ' ಎಂಬ ಭಾವನೆಯು ಭದ್ರವಾಗುತ್ತಾ ಹೋಗುತ್ತದೆ. ಇದು ಎರಡನೆಯ ಹಂತದ ಉತ್ತಮ ಧ್ಯಾನವು ಅಥವಾ ಭಾವನೆಯು.

ಈ ಭಾವನೆಯು ಬಲವಾಗುತ್ತಾ ಹೋದಂತೆಲ್ಲಾ ಇದನ್ನೂ ಮೀರಿ ಸಾಧಕನು ಮುಂದುವರಿಯುತ್ತಾನೆ. ಈಗ ಮೂರನೆಯ ಹಂತದ ಧ್ಯಾನದಲ್ಲಿ ಭಾವನೆಯೂ ಅಳಿದು ಅಲ್ಲಿ ಸದ್ಭಾವಮಾತ್ರವಿರುತ್ತದೆ. **ಸತ್** ಎಂದರೆ ಇರುವಿಕೆಯ ಸ್ವರೂಪವೇ ಆದ **ಭಾವ** ಎಂದರೆ ಇರುವಿಕೆಯು, **ಸು** ಎಂದರೆ **ಸುತರಾಂ** ಎಂದರೆ ಸಂಪೂರ್ಣವಾಗಿ, **ಸ್ಥಿತಿಃ** ಎಂದರೆ ಉಳಿದುಕೊಳ್ಳುವಿಕೆ. ಕೇವಲ ಅರಿವಿನ ಸ್ವರೂಪನಾಗಿ ಉಳಿದುಕೊಳ್ಳುವಿಕೆ. ಈ ಸ್ಥಿತಿಯಲ್ಲಿ ಯಾವ ಭಾವನೆಯೂ ಇರುವುದಿಲ್ಲ. ಇದೇ ಸಚ್ಚಿದಾನಂದಸಹಜಸ್ಥಿತಿಯು! ಇದೇ ಭಕ್ತಿ, ಇದೇ ಜ್ಞಾನನಿಷ್ಠೆ. ಇದೇ ಸ್ವರೂಪನಿಷ್ಠೆಯೂ ಹೌದು, ಇದೇ ಸಹಜಸಮಾಧಿಯು.

**ಸಾಧಕರು ಸಹಜಸಮಾಧಿಯಲ್ಲಿ ಇರಬೇಕು.**

# 10. ಹೃದಯದಲ್ಲಿ ಮನಸ್ಸು ನಿಲ್ಲಬೇಕು

ಹೃತ್‌ಸ್ಥಲೇ ಮನಃಸ್ವಸ್ಥತಾ ಕ್ರಿಯಾ।
ಭಕ್ತಿಯೋಗಬೋಧಾಶ್ಚ ನಿಶ್ಚಿತಮ್ ॥ ೧೦ ॥

**ಪದಚ್ಛೇದ:** ಹೃತ್‌ಸ್ಥಲೇ ಮನಃಸ್ವಸ್ಥತಾ ಕ್ರಿಯಾ ಭಕ್ತಿಯೋಗಬೋಧಾಃ ಚ ನಿಶ್ಚಿತಮ್.

**ಅನ್ವಯ:** ಹೃತ್‌ಸ್ಥಲೇ ಮನಃಸ್ವಸ್ಥತಾ ಕ್ರಿಯಾ ಚ ಭಕ್ತಿಯೋಗಬೋಧಾಃ ಏತತ್ ನಿಶ್ಚಿತಮ್.

**ಅನ್ವಯಾರ್ಥ:** **ಹೃತ್‌ಸ್ಥಲೇ** = ಹೃದಯವೆಂಬ ಸ್ಥಲದಲ್ಲಿ, **ಮನಃ ಸ್ವಸ್ಥತಾ** = ಮನಸ್ಸು ಸ್ವಸ್ಥವಾಗುವುದು, **ಕ್ರಿಯಾ** = ನಿಜವಾದ ಕರ್ಮವು, **ಚ** = ಮತ್ತು, **ಭಕ್ತಿಯೋಗಬೋಧಾಃ** = ಭಕ್ತಿಯೂ ಯೋಗವೂ ಬೋಧವೂ ಆಗಿರುತ್ತದೆ. **ಏತತ್** = ಇದು, **ನಿಶ್ಚಿತಮ್** = ನಿಶ್ಚಿತವಾದ ತಿಳಿವಳಿಕೆ.

**ತಾತ್ಪರ್ಯಾರ್ಥ:** ಪರಮಾರ್ಥ ಹೃದಯದಲ್ಲಿ ಮನಸ್ಸು ಕರಗಿಹೋಗಿ ನಿಲ್ಲುವುದೇ ನಿಜವಾದ ಕರ್ಮ, ಭಕ್ತಿ, ಯೋಗ, ಜ್ಞಾನಗಳೆಂದು ತಿಳಿಯಬೇಕು.

ವೇದಾಂತಗಳಲ್ಲಿ ಆತ್ಮಜ್ಞಾನನಿಷ್ಠೆಗೆ ಕರ್ಮಯೋಗ, ಭಕ್ತಿಯೋಗ, ಧ್ಯಾನ ಯೋಗ ಮತ್ತು ಜ್ಞಾನಯೋಗಗಳೆಂದು ನಾಲ್ಕು ರೀತಿಯ ಸಾಧನಮಾರ್ಗಗಳನ್ನು ತಿಳಿಸಿದ್ದಾರೆ. ಈ ಎಲ್ಲಾ ಸಾಧನಮಾರ್ಗಗಳ ಗುರಿಯೆಂದರೆ **ಆತ್ಮಜ್ಞಾನನಿಷ್ಠೆ.** ಆತ್ಮಜ್ಞಾನನಿಷ್ಠೆಯೆಂದರೆ ಅಲ್ಲಿಗೆ ಎಲ್ಲಾ ಸಾಧನಗಳೂ ಕೊನೆಗೊಂಡಂತೆಯೇ ಆಗಿಬಿಡುತ್ತವೆ. ಅಲ್ಲಿಂದ ಮುಂದಕ್ಕೆ ಸಾಧಕನು ಏನೇನನ್ನೂ ಮಾಡಬೇಕಾಗಿಲ್ಲ. ಆತ್ಮನಿಷ್ಠೆಯೇ ಪರಾಕಾಷ್ಠಾ. ಇದನ್ನೇ ಈ ಶ್ಲೋಕದಲ್ಲಿ ಸೊಗಸಾಗಿ ತಿಳಿಸಿದೆ.

ಹೃದಯದಲ್ಲಿ ಎಂದರೆ ಆತ್ಮನಲ್ಲಿ ಎಂದರ್ಥ. ಇಲ್ಲಿ ಹೃದಯವೆಂದರೆ ಬರೀ ಮಾಂಸಪಿಂಡಾಕಾರವಾಗಿರುವ ಭೌತಿಕವಾದ ಹೃದಯವಲ್ಲ. ಭೌತಿಕವಾದ ಹೃದಯವು ದೇಹದ ಎಡಭಾಗದಲ್ಲಿದ್ದು ರಕ್ತವನ್ನು ಎಲ್ಲ ಕಡೆಗಳಿಗೂ ಕಳಿಸುತ್ತಾ ಇರುತ್ತದೆ. ಹೌದು, ದಿಟ, ಆದರೆ ಇದು ವೇದಾಂತದ ಹೃದಯವಲ್ಲ. ವೇದಾಂತದ ಹೃದಯವು ಮನಸ್ಸಿನ ಉಗಮಸ್ಥಾನ. ಮನಸ್ಸಿಗೆ ಸಾಕ್ಷಿಯಾದ ಆತ್ಮನೇ ಹೃದಯವು. ಆತ್ಮನಲ್ಲಿ ಮನಸ್ಸು ನೆಲೆಗೊಂಡಿತು ಎಂದಮೇಲೆ ಅಲ್ಲಿಗೆ ಕರ್ಮಭಕ್ತಿಜ್ಞಾನಗಳೆಲ್ಲವೂ ಕೊನೆಗೊಂಡಂತೆಯೇ ಆಗುತ್ತವೆ. ಆತ್ಮನಿಷ್ಠನಾದ ಜ್ಞಾನಿಗೆ ಇನ್ನು ಮುಂದೆ ಕರ್ತವ್ಯಸಾಧನಗಳಾವುವೂ ಇರಲಾರವಷ್ಟೆ?

**ಆತ್ಮನಿಷ್ಠನಾಗುವುದೇ ಸಾಧನಗಳ ಗುರಿ.**

# 11. ಪ್ರಾಣನಿರೋಧದಿಂದ ಮನೋಲಯ

ವಾಯುರೋಧನಾತ್ ಲೀಯತೇ ಮನಃ।
ಜಾಲಪಕ್ಷಿವದ್ ರೋಧಸಾಧನಮ್ ॥ ೧೧ ॥

**ಪದಚ್ಛೇದ:** ವಾಯುರೋಧನಾತ್ ಲೀಯತೇ ಮನಃ ಜಾಲಪಕ್ಷಿವತ್ ರೋಧಸಾಧನಮ್.

**ಅನ್ವಯ:** ವಾಯುರೋಧನಾತ್ ಜಾಲಪಕ್ಷಿವತ್ ಮನಃ ಲೀಯತೇ, ತಸ್ಮಾತ್ ಪ್ರಾಣಾಯಾಮಃ ರೋಧಸಾಧನಮ್.

**ಅನ್ವಯಾರ್ಥ: ವಾಯುರೋಧನಾತ್** = ಪ್ರಾಣವನ್ನು ನಿರೋಧಮಾಡುವುದರಿಂದ, **ಜಾಲಪಕ್ಷಿವತ್** = ಬಲೆಯಲ್ಲಿ ಬಂಧಿಸಲ್ಪಟ್ಟ ಪಕ್ಷಿಯಂತೆ, **ಮನಃ** = ಮನಸ್ಸು, **ಲೀಯತೇ** = ಆತ್ಮನಲ್ಲಿ ಕರಗಿಹೋಗುತ್ತದೆ. ಆದ್ದರಿಂದ ಪ್ರಾಣಾಯಾಮವು, **ರೋಧಸಾಧನಮ್** = ಮನಸ್ಸನ್ನು ನಿಯಂತ್ರಣಮಾಡುವುದಕ್ಕೆ ಸಾಧನವಾಗುತ್ತದೆ.

**ತಾತ್ಪರ್ಯಾರ್ಥ:** ತುಂಟ ಮನಸ್ಸನ್ನು ಆತ್ಮನಲ್ಲಿ ನಿಲ್ಲಿಸುವುದು ಎಂಬುದು ಹೇಳುವಷ್ಟೇನೂ ಸುಲಭವಲ್ಲ, ಆದರೆ ನಿಲ್ಲಿಸುವುದು ಕಷ್ಟವೇನೂ ಅಲ್ಲ. ಮನಸ್ಸು ಆತ್ಮನಲ್ಲಿ ಕರಗಿಹೋಯಿತೆಂದರೆ ಇನ್ನು ಮುಂದೆ ಮನಸ್ಸೇ ಇಲ್ಲದ್ದರಿಂದ, ಮನಸ್ಸಿನ ಹರಿದಾಟಗಳಾಗಲೀ, ಸಂಸಾರಬಂಧನವಾಗಲೀ ಇರುವುದೇ ಇಲ್ಲ. ಆತ್ಮನಲ್ಲಿ ಮನಸ್ಸನ್ನು ತಾತ್ಕಾಲಿಕವಾಗಿ ಕರಗಿಸುವುದಕ್ಕೆ **ಅಮನಸ್ಕಯೋಗ** ಎಂದು ಹೆಸರು. ಇದು ಕೇವಲ ಮನಸ್ಸನ್ನು ತಾತ್ಕಾಲಿಕವಾಗಿ ಆತ್ಮನಲ್ಲಿ ತಂದು ನಿಲ್ಲಿಸುವ ಪ್ರಯತ್ನವಲ್ಲ, ಮತ್ತೇನೆಂದರೆ ಮನಸ್ಸಿನ ಅಸ್ತಿತ್ವವನ್ನೇ ನಾಶಮಾಡಿಕೊಂಡು ಆತ್ಮನೇ ಆಗಿಬಿಡುವುದು. ಇದಕ್ಕೆ ಸಾಧನವನ್ನು ಇಲ್ಲಿ ತಿಳಿಸಿದೆ.

**ವಾಯುರೋಧನಾತ್ ಮನಃ ಲೀಯತೇ.** ವಾಯುವಿನ ರೋಧನದಿಂದ, ಎಂದರೆ ಉಸಿರಾಟವನ್ನು ತಡೆದು ಹಿಡಿಯುವುದರಿಂದ; ಪೂರಕ ಕುಂಭಕಗಳಿಂದ ಮನಸ್ಸು ಆತ್ಮನಲ್ಲಿಯೇ ಕರಗಿಹೋಗುತ್ತದೆ. ಇದಕ್ಕೊಂದು ಪ್ರಸಿದ್ಧವಾದ ದೃಷ್ಟಾಂತ: **ಜಾಲಪಕ್ಷಿವತ್** ಎಂದು. ಎಲ್ಲಾ ಕಡೆಗಳಲ್ಲಿಯೂ ಹಾರಾಡುವ ಪಕ್ಷಿಯನ್ನು ಬಲೆಯಲ್ಲಿ ಹಿಡಿದುಹಾಕುವಂತೆ, ಚಂಚಲವಾದ ಮನಸ್ಸನ್ನು ಪ್ರಾಣಾಯಾಮದಿಂದ ಎಳೆದುತಂದು ಆತ್ಮನಲ್ಲಿ ನಿಲ್ಲಿಸಬೇಕು. ಹೀಗೆ ಮಾಡಿದ ಪ್ರಾಣನಿರೋಧವು ಮುಂದೆ ಮನೋಲಯಕ್ಕೆ ಸಾಧನವಾಗುತ್ತದೆಯಲ್ಲವೇ?

**ಪ್ರಾಣಾಯಾಮದಿಂದ ಮನಸ್ಸನ್ನು ಕರಗಿಸಿಕೊಳ್ಳಬೇಕು.**

# 12. ಚಿತ್ತ ಪ್ರಾಣಗಳಿಗೆ ಚೈತನ್ಯವೇ ಮೂಲ

ಚಿತ್ತವಾಯವಶ್ಚಿತ್‌ಕ್ರಿಯಾಯುತಾಃ।
ಶಾಖಯೋರ್ದ್ವಯೀ ಶಕ್ತಿಮೂಲಕಾ ॥೧೨॥

**ಪದಚ್ಛೇದ:** ಚಿತ್ತವಾಯವಃ ಚಿತ್‌ಕ್ರಿಯಾಯುತಾಃ ಶಾಖಯೋಃ ದ್ವಯೀ ಶಕ್ತಿಮೂಲಕಾ.

**ಅನ್ವಯ:** ಚಿತ್ತವಾಯವಃ ಚಿತ್‌ಕ್ರಿಯಾಯುತಾಃ, ಶಾಖಯೋಃ ದ್ವಯೀ ಶಕ್ತಿಮೂಲಕಾ.

**ಅನ್ವಯಾರ್ಥ: ಚಿತ್ತವಾಯವಃ** = ಚಿತ್ತ ಮತ್ತು ವಾಯುಗಳು, **ಚಿತ್ ಕ್ರಿಯಾಯುತಾಃ** = ಅರಿವು ಮತ್ತು ಕ್ರಿಯೆಗಳಿಂದ ಕೂಡಿಕೊಂಡಿರುತ್ತವೆ. **ಶಾಖಯೋಃ** = ಎರಡು ಶಾಖೆಗಳ, **ದ್ವಯೀ** = ಎರಡಾಗಿ, **ಶಕ್ತಿಮೂಲಕಾ** = ಆತ್ಮನ ಶಕ್ತಿಯನ್ನೇ ಮೂಲವುಳ್ಳದ್ದಾಗಿರುತ್ತವೆ.

**ತಾತ್ಪರ್ಯಾರ್ಥ:** ಚಿತ್ತ ಮತ್ತು ವಾಯುಗಳೆಂದರೆ ಮನಸ್ಸು ಮತ್ತು ಪ್ರಾಣಗಳು; ಚಿತ್‌ಕ್ರಿಯಾಯುತವಾಗಿರುತ್ತವೆ. ಚಿತ್ ಅಂದರೆ ಚೈತನ್ಯ, ಕ್ರಿಯಾ ಎಂದರೆ ವ್ಯಾಪಾರ, ಯುತಾಃ ಎಂದರೆ ಕೂಡಿಕೊಂಡಿರುತ್ತವೆ ಎಂದರ್ಥ. ಮನಸ್ಸು, ಬುದ್ಧಿ, ಚಿತ್ತಗಳೂ; ಮತ್ತು ಪ್ರಾಣ ಅಪಾನ ವ್ಯಾನ ಉದಾನ ಸಮಾನಗಳೆಂಬ ವಾಯುಗಳೂ ಚೈತನ್ಯವನ್ನೇ ಆಶ್ರಯಿಸಿಕೊಂಡು ಬದುಕಿರುತ್ತವೆ. ಚಿತ್ ಎಂದರೆ ಚೈತನ್ಯರೂಪವಾದ ಪ್ರತ್ಯಗಾತ್ಮ. ಇವನು ಕೂಟಸ್ಥನಾಗಿರುತ್ತಾನೆ.

ಮನಸ್ಸಿನ ವ್ಯಾಪಾರಗಳಾಗಲೀ ಪ್ರಾಣನ ವ್ಯಾಪಾರಗಳಾಗಲೀ ಸ್ವತಂತ್ರವಲ್ಲ. ವಿದ್ಯುಚ್ಛಕ್ತಿಯ ಸಹಾಯದಿಂದಲೇ ಎಲ್ಲಾ ಕರಣಗಳೂ ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತವೆಯಲ್ಲವೇ? ಕರಣಗಳ ವ್ಯಾಪಾರಗಳು ಪ್ರಮಾಣಗಳಿಗೆ ಗೋಚರ ವಾಗುತ್ತವೆ. ಆದರೆ ಈ ವ್ಯಾಪಾರಗಳಿಗೆ ಮೂಲವಾದ ವಿದ್ಯುಚ್ಛಕ್ತಿಯು ಮಾತ್ರ ಕಣ್ಣುಗಳಿಗೆ ಗೋಚರವಾಗುವುದಿಲ್ಲ. ಹೀಗೆಯೇ ಪ್ರತ್ಯಗಾತ್ಮನು ಯಾವ ಪ್ರಮಾಣ ಗಳಿಗೂ ಗೋಚರನಲ್ಲ, ಆದರೆ ಅವನಿಲ್ಲದೇ ಪ್ರಾಣವ್ಯಾಪಾರಗಳಾಗಲೀ ಮನೋ ವ್ಯಾಪಾರಗಳಾಗಲೀ ಇಲ್ಲವೇ ಇಲ್ಲ. ನಿಜವಾಗಿ ನೋಡಿದರೆ ಚಿತ್ತವನ್ನು ಬಿಟ್ಟು ಪ್ರಾಣವಾಗಲೀ, ಪ್ರಾಣವನ್ನು ಬಿಟ್ಟು ಚಿತ್ತವಾಗಲೀ ಇಲ್ಲವೇ ಇಲ್ಲ. ಇವೆರಡೂ ಆತ್ಮನನ್ನೇ ಆಶ್ರಯಿಸಿಕೊಂಡಿರುತ್ತವೆ. ಆತ್ಮನೇ ಇವೆರಡಕ್ಕೂ ಮೂಲಶಕ್ತಿ ಯಾಗಿದ್ದಾನೆ. ಈ ಆತ್ಮನನ್ನು ತಿಳಿದವನೇ ಬ್ರಹ್ಮನಿಷ್ಠನು.

**ಮನಸ್ಸಿಗೂ ಪ್ರಾಣಕ್ಕೂ ಆತ್ಮನೇ ಶಕ್ತಿಯಾಗಿದ್ದಾನೆ.**

# 13. ಮನೋಲಯವೂ ಮನೋನಾಶವೂ

ಲಯವಿನಾಶನೇ ಉಭಯರೋಧನೇ।
ಲಯಗತಂ ಪುನರ್ಭವತಿ ನೋ ಮೃತಮ್ ॥೧೩॥

**ಪದಚ್ಛೇದ:** ಲಯವಿನಾಶನೇ ಉಭಯರೋಧನೇ ಭವತಃ, ಲಯಗತಂ ಪುನಃ ಭವತಿ ನೋ ಮೃತಂ.

**ಅನ್ವಯ:** ಲಯವಿನಾಶನೇ (ಉಭೇಽಪಿ) ಉಭಯರೋಧನೇ ಭವತಃ; ಲಯಗತಂ ಮನಃ ಪುನಃ ಭವತಿ, ಮೃತಂ ಮನಃ ಪುನಃ ನೋ ಭವತಿ.

**ಅನ್ವಯಾರ್ಥ: ಲಯವಿನಾಶನೇ** = ಲಯವಾಗುವುದು ಮತ್ತು ನಾಶವಾಗುವುದು, ಇವೆರಡೂ ಕೂಡ, **ಉಭಯರೋಧನೇ** = ಮನಸ್ಸನ್ನು ತಡೆಹಿಡಿಯುವುದಕ್ಕೆ ಸಾಧನವೇ ಆಗಿರುತ್ತವೆ. **ಲಯಗತಂ ಮನಃ** = ಲಯವನ್ನು ಹೊಂದಿರುವ ಮನಸ್ಸು, **ಪುನಃ** = ಮತ್ತೆ, **ಭವತಿ** = ಏಳುತ್ತದೆ. **ಮೃತಂ ಚೇತ್** = ಆದರೆ ಮನಸ್ಸು ಮೃತವಾಗಿಬಿಟ್ಟರೆ, **ಪುನಃ ನೋ** = ಏಳುವ ಪ್ರಶ್ನೆಯೇ ಇಲ್ಲ.

**ತಾತ್ಪರ್ಯಾರ್ಥ:** ಮನಸ್ಸನ್ನು ಲಯಮಾಡಿಕೊಳ್ಳುವುದು ಮತ್ತು ಸಂಪೂರ್ಣವಾಗಿ ನಾಶಮಾಡಿಕೊಳ್ಳುವುದು ಎಂದು ರೋಧನಕ್ರಮವು ಎರಡು ರೀತಿಯಾಗಿರುತ್ತದೆ. ಈ ತುಂಟಮನಸ್ಸನ್ನು ವಿವೇಕಾಭ್ಯಾಸವೈರಾಗ್ಯಗಳಿಂದ ಆತ್ಮನಲ್ಲಿ ಸ್ವಲ್ಪ ಕಾಲ ನಿಲ್ಲಿಸಿಬಿಡಬಹುದು. ಇದಕ್ಕೆ **ಮನೋಲಯ** ಎಂದು ಹೆಸರು. ಕೆಲವು ನಿಮಿಷಗಳ ವರೆಗೆ, ಕೆಲವು ಗಂಟೆಗಳ ವರೆಗೆ, ಅಥವಾ ಕೆಲವು ದಿನಗಳ ವರೆಗೆ, ಅಥವಾ ಇನ್ನೂ ಕೆಲವು ತಿಂಗಳುಗಳ ವರೆಗೆ ಈ ಮನಸ್ಸನ್ನು ಆತ್ಮನಲ್ಲಿ ಕರಗಿಸಿಕೊಂಡು ಅಮನಸ್ಕನಾಗಿಸಿಕೊಳ್ಳಬಹುದು. ಇದೇನು ದೊಡ್ಡಸಾಧನೆಯಲ್ಲ. ಏಕೆಂದರೆ ಈಗ ಈ ಹಂತದಲ್ಲಿ ಮನಸ್ಸು ಸುಪ್ತವಾಗಿರುತ್ತದೆ. ಆದರೆ ಆ ಸಮಾಧಿಯಿಂದ ಏಳುತ್ತಲೇ ಮನಸ್ಸಿನ ಭರ್ತಿ ಸಂಸ್ಕಾರಗಳು ಉಳಿದುಕೊಂಡಿರುತ್ತವೆ. ಆದರೆ ಮನಸ್ಸೇ ಇಲ್ಲವಾಗಿಬಿಟ್ಟರೆ ಅಂದರೆ ಆತ್ಮನಲ್ಲಿಯೇ ಮೃತವಾಗಿಬಿಟ್ಟರೆ ಆಗ ಮನಸ್ಸು ಪುನಃ ಹುಟ್ಟಿ ಬರಲಾರದು. ಮನೋಲಯ ಸಾಧನೆಯು ತಾತ್ಕಾಲಿಕ, ಕ್ಷಣಿಕ ಹಾಗೂ ಅನಿತ್ಯ; ಆದರೆ ಮನೋನಾಶವು ಶ್ರೇಷ್ಠವಾದದ್ದು. ಇಲ್ಲಿ ಮನಸ್ಸೇ ಇಲ್ಲ. ಹೀಗಾಗಿಬಿಟ್ಟರೆ ಆಗ ಇಲ್ಲದ ಮನಸ್ಸು ಪುನಃ ಹುಟ್ಟಿ ಬರಲಾರದಲ್ಲವೇ? ಮನೋನಾಶಕ್ಕೇ **ಅಮನಸ್ಕಯೋಗ** ಎಂದೂ ಹೆಸರು. ವಿಚಾರವೆಂಬ ರಾಜಮಾರ್ಗದಿಂದ **"ಆತ್ಮೈವೇದಂ ಸತ್ಯಂ"** ಎಂಬ ನಿಶ್ಚಯ ಜ್ಞಾನವು ಉಂಟಾಗಿ ಬಿಟ್ಟರೆ ಅದೇ ಮನೋನಾಶಯೋಗವಾಗಿಬಿಡುತ್ತದೆ.

**ಮನಸ್ಸನ್ನು ಆತ್ಮನಲ್ಲಿ ಕರಗಿಸಿಕೊಳ್ಳಬೇಕು.**

# 14. ಆತ್ಮಚಿಂತನೆಯಿಂದ ಮನೋನಾಶ

ಪ್ರಾಣಬಂಧನಾಲ್ಲೀನಮಾನಸಮ್ ।
ಏಕಚಿಂತನಾನ್ನಾಶಮೇತ್ಯದಃ ॥ ೧೪ ॥

**ಪದಚ್ಛೇದ:** ಪ್ರಾಣಬಂಧನಾತ್ ಲೀನಮಾನಸಂ ಏಕಚಿಂತನಾತ್ ನಾಶಂ ಏತಿ ಅದಃ.

**ಅನ್ವಯ:** ಪ್ರಾಣಬಂಧನಾತ್ ಲೀನಮಾನಸಂ ಭವತಿ, ಏಕಚಿಂತನಾತ್ ಅದಃ ನಾಶಮ್ ಏತಿ.

**ಅನ್ವಯಾರ್ಥ: ಪ್ರಾಣಬಂಧನಾತ್** = ಪ್ರಾಣದ ನಿಯಂತ್ರಣದಿಂದ, **ಲೀನ ಮಾನಸಂ** = ಮನಸ್ಸು ಆತ್ಮನಲ್ಲಿ ಲಯಗೊಳ್ಳುತ್ತದೆ; ಆದರೆ **ಏಕಚಿಂತನಾತ್** = ಆತ್ಮನೊಬ್ಬನನ್ನೇ ಧ್ಯಾನಮಾಡುತ್ತಿದ್ದರೆ, **ಅದಃ ಮನಃ** = ಆ ಮನಸ್ಸು, **ನಾಶಮ್ ಏತಿ** = ನಾಶವನ್ನು ಹೊಂದುತ್ತದೆ.

**ತಾತ್ಪರ್ಯಾರ್ಥ:** ಉಸಿರಿನ ಬಂಧನದಿಂದ ಎಂದರೆ **ಕುಂಭಕ** ಪ್ರಾಣಾಯಾಮದಿಂದ ಮನಸ್ಸು ಆತ್ಮನಲ್ಲಿಯೇ ಕರಗಿಹೋಗುತ್ತದೆ. ಆದರೆ ಅದೇ ಶುದ್ಧವಾದ ಹಾಗೂ ಏಕಾಗ್ರೀಕೃತ ಮನಸ್ಸಿನಿಂದ ಆತ್ಮನೊಬ್ಬನನ್ನೇ ಸಂತತವಾಗಿ ಧ್ಯಾನಿಸುತ್ತಿದ್ದರೆ ಆಗ ಆ ಮನಸ್ಸೇ ನಾಶವಾಗಿಬಿಡುತ್ತದೆ.

ಧ್ಯಾನದಿಂದ ಮನಸ್ಸು ಲೀನವೂ ಆಗುತ್ತದೆ, ಮನಸ್ಸು ನಾಶವೂ ಆಗಿಬಿಡುತ್ತದೆ. **ಮನೋಲಯವು** ಉತ್ತಮ ಫಲವೇ ಆದರೂ **ಮನೋನಾಶ**ವೆಂಬುದು ಅಂತಿಮ ಫಲವಾಗಿರುತ್ತದೆ. ಪ್ರಾಣಾಯಾಮವನ್ನು ಶ್ರದ್ಧೆಯಿಂದ ನಿಷ್ಠೆಯಿಂದ ಮತ್ತು ಕ್ರಮಬದ್ಧವಾಗಿ ಮಾಡುತ್ತಾ ಬಂದರೆ ಅದರಿಂದ ಆ ತುಂಟಮನಸ್ಸು ನಮಗೆ ಸ್ವಾಧೀನಕ್ಕೆ ಬರುತ್ತದೆ. ಹಾಗೆಯೇ ಪ್ರಾಣಬಂಧನವನ್ನು ಮುಂದುವರಿಸುತ್ತಾ ಬಂದಂತೆ ಆ ಮನಸ್ಸು ಆತ್ಮನಲ್ಲಿ ಲಯವಾಗಿಬಿಡುತ್ತದೆ. ಇದಕ್ಕೇ ಮನೋನಿಗ್ರಹ, ಮನೋಲಯ, ಮನೋನಿರೋಧ—ಎಂದೆಲ್ಲಾ ಹೆಸರುಗಳು. ಆದರೆ ನೆನಪಿರಲಿ, ಇದೇ ಪರಾಕಾಷ್ಠೆಯಲ್ಲ, ಇದೇ ಪರಮಗುರಿಯಲ್ಲ.

ಪ್ರಾಣಾಯಾಮದ ಜೊತೆಜೊತೆಗೇ ಏಕಚಿಂತನೆಯನ್ನೂ ಮಾಡಬೇಕು. **ಏಕ** ಎಂದರೆ ಅದ್ವಿತೀಯವಾದ ಬ್ರಹ್ಮ; ಬ್ರಹ್ಮದ ಚಿಂತನೆಯೆಂದರೆ, **ನಾನೇ ಬ್ರಹ್ಮ** ಎಂಬ ವಿಚಾರಧಾರೆ. **ಆತ್ಮೈವೇದಂ ಸರ್ವಂ**, ಇದೆಲ್ಲವೂ ಆತ್ಮನೇ ಎಂಬ ಅದ್ವೈತದ ಧ್ಯಾನವನ್ನು ಮಾಡಿದರೆ ಆಗ ಆ ಮನಸ್ಸು ಆತ್ಮನಲ್ಲಿಯೇ ಕರಗಿ ಆತ್ಮನೇ ಆಗಿಬಿಡುತ್ತದೆ. ಇದಕ್ಕೇ ಆತ್ಮಭಾವಾಪತ್ತಿ ಎಂದು ಹೆಸರು. ಇದೇ ಮುಕ್ತಿಯು.

**ಆತ್ಮಚಿಂತನೆಯಿಂದ ಮನಸ್ಸು ಆತ್ಮನೇ ಆಗಿಬಿಡುತ್ತದೆ.**

# 15. ಉತ್ಕೃಷ್ಟಯೋಗಿಯಿವನು

ನಷ್ಟಮಾನಸೋತ್ಕೃಷ್ಟಯೋಗಿನಃ ।
ಕೃತ್ಯಮಸ್ತಿ ಕಿಂ ಸ್ವಸ್ಥಿತಿಂ ಯತಃ ॥ ೧೫ ॥

**ಪದಚ್ಛೇದ:** ನಷ್ಟಮಾನಸಃ ಉತ್ಕೃಷ್ಟಯೋಗಿನಃ ಕೃತ್ಯಮ್ ಅಸ್ತಿ ಕಿಂ ಸ್ವಸ್ಥಿತಿಂ ಯತಃ.

**ಅನ್ವಯ:** ಸ್ವಸ್ಥಿತಿಂ ಯತಃ ನಷ್ಟಮಾನಸಃ ಉತ್ಕೃಷ್ಟಯೋಗಿನಃ ಕೃತ್ಯಮ್ ಅಸ್ತಿ ಕಿಮ್?

**ಅನ್ವಯಾರ್ಥ: ಸ್ವಸ್ಥಿತಿಂ** = ತನ್ನ ಸಹಜಸ್ಥಿತಿಯನ್ನು, **ಯತಃ** = ಹೊಂದಿರುವಂಥ, **ನಷ್ಟಮಾನಸಃ** = ಮನಸ್ಸನ್ನೇ ನಾಶಮಾಡಿಕೊಂಡಿರುವಂಥ, **ಉತ್ಕೃಷ್ಟಯೋಗಿನಃ** = ಶ್ರೇಷ್ಠನಾದ ಆತ್ಮಯೋಗಿಗೆ, **ಕೃತ್ಯಮ್** = ಮಾಡಬೇಕಾದ ಸಾಧನವಾಗಲೀ ಅನುಷ್ಠಾನವಾಗಲೀ ಅಥವಾ ಕರ್ತವ್ಯವಾಗಲೀ, **ಅಸ್ತಿ** = ಇದೆ, **ಕಿಮ್** = ಏನು? ಇದೆಯೇನು? ಎಂದರೆ, ಏನೇನೂ ಇಲ್ಲ ಎಂದರ್ಥ.

**ತಾತ್ಪರ್ಯಾರ್ಥ:** ತನ್ನ ಅದ್ವಿತೀಯವಾದ ಸ್ವಸ್ವರೂಪದಲ್ಲಿ ನೆಲೆಗೊಂಡಿರುವಂಥ, ಮನಸ್ಸನ್ನೇ ಇಲ್ಲವಾಗಿಸಿಕೊಂಡಿರುವಂಥ ಉತ್ಕೃಷ್ಟಯೋಗಿಗೆ ಯಾವ ಕರ್ತವ್ಯವೂ ಇಲ್ಲ. ಬ್ರಹ್ಮನಿಷ್ಠನಾಗಿ, ಬ್ರಹ್ಮಸ್ವರೂಪನೇ ಆಗಿರುವ ಬ್ರಹ್ಮಯೋಗಿಗೆ ಕರ್ತವ್ಯಗಳಿರುವುದಿಲ್ಲ. ಏಕೆಂದರೆ **ಸರ್ವಂ ಬ್ರಹ್ಮೈವ, ಸರ್ವಮ್ ಆತ್ಮೈವ** ಎಂಬ ಅನುಭವವು ಉಂಟಾದ ಬಳಿಕ ಕ್ರಿಯಾಕಾರಕಫಲಗಳೇ ಇರುವುದಿಲ್ಲ.

ಯೋಗಿಗಳಲ್ಲಿ ಎರಡು ವಿಧ: ಸಾಮಾನ್ಯಯೋಗಿಗಳು, ಉತ್ಕೃಷ್ಟಯೋಗಿಗಳು ಎಂದು. ಸಾಮಾನ್ಯಯೋಗಿಗಳೆಂದರೆ ಮನಸ್ಸನ್ನು ಶುದ್ಧಮಾಡಿಕೊಂಡು ಹೊರಗಿನ ಅನಾತ್ಮವಿಷಯಗಳಿಂದ ಸೆಳೆದುಕೊಂಡು, ಅದನ್ನು ಕಷ್ಟಪಟ್ಟು ಆಗಾಗ್ಗೆ ಆತ್ಮನಲ್ಲಿ ನಿಲ್ಲಿಸುವ ಪ್ರಯತ್ನವನ್ನು ಮಾಡುತ್ತಿರುವವರು. ಇವರು ಉತ್ತಮ ಸಾಧಕರು. ಇವರಿಗೆ ಅನೇಕ ರೀತಿಯ ಕರ್ತವ್ಯಗಳು ಇದ್ದೇ ಇರುತ್ತವೆ.

ಆದರೆ ಉತ್ಕೃಷ್ಟಯೋಗಿಗಳಿಗೆ ಮಾತ್ರ ಕರ್ತವ್ಯಸಾಧನೆಗಳೇನೂ ಇರುವುದಿಲ್ಲ. ಏಕೆಂದರೆ ಇವರಿಗೆ ಮನಸ್ಸೇ ಇಲ್ಲವಲ್ಲ! ಆತ್ಮನ ಜೊತೆಗೆ ಮನಸ್ಸೊಂದು ಬೇರೆಯಾಗಿದ್ದರೆ ಅಲ್ಲಿ ಅದನ್ನು ಮಾಡಬೇಕು, ಇದನ್ನು ಹೊಂದಬೇಕು ಎಂಬ ಭ್ರಮೆಯು ಸತ್ಯವಾಗಿರುತ್ತದೆ. ಉತ್ಕೃಷ್ಟಯೋಗಿಗೆ ಇಂಥ ಭ್ರಮೆಗಳೇ ಇರುವುದಿಲ್ಲ. ಇವನಿಗೆ ಎಲ್ಲವೂ ಆತ್ಮನೇ ಆಗಿರುತ್ತದೆ.

**ಉತ್ಕೃಷ್ಟಯೋಗಿಗೆ ಕರ್ತವ್ಯಗಳಿರುವುದಿಲ್ಲ.**

# 16. ತತ್ತ್ವದರ್ಶನಕ್ಕೆ ಸಾಧನವಿದು

ದೃಶ್ಯವಾರಿತಂ ಚಿತ್ತಮಾತ್ಮನಃ।
ಚಿತ್ತ್ವದರ್ಶನಂ ತತ್ತ್ವದರ್ಶನಮ್ ॥೧೬॥

**ಪದಚ್ಛೇದ:** ದೃಶ್ಯವಾರಿತಂ ಚಿತ್ತಮ್ ಆತ್ಮನಃ ಚಿತ್ತ್ವದರ್ಶನಂ ತತ್ತ್ವ ದರ್ಶನಮ್.

**ಅನ್ವಯ:** ದೃಶ್ಯವಾರಿತಂ ಚಿತ್ತಂ ಆತ್ಮನಃ ಚಿತ್ತ್ವದರ್ಶನಂ ತತ್ತ್ವದರ್ಶನಂ.

**ಅನ್ವಯಾರ್ಥ: ದೃಶ್ಯವಾರಿತಂ** = ದೃಶ್ಯವಸ್ತುಗಳನ್ನು ನಿವಾರಿಸಿಕೊಂಡಿರುವಂಥ, **ಚಿತ್ತಮ್** = ಚಿತ್ತವು, **ಆತ್ಮನಃ** = ತನ್ನ, **ಚಿತ್ತ್ವದರ್ಶನಮ್** = ಪರಿಶುದ್ಧವಾದ ಚೈತನ್ಯದ ದರ್ಶನವನ್ನು ಮಾಡಿಸುತ್ತದೆ. ಇದೇ, **ತತ್ತ್ವದರ್ಶನಮ್** = ತತ್ತ್ವದರ್ಶನವು ಎಂದರೆ ಪರಮಾರ್ಥದರ್ಶನವು, ಸತ್ಯದರ್ಶನವು.

**ತಾತ್ಪರ್ಯಾರ್ಥ:** ವಿವೇಕದ ಬಲದಿಂದ ಈ ದ್ವೈತಪ್ರಪಂಚವನ್ನೆಲ್ಲ ಸಂಪೂರ್ಣವಾಗಿ ಇಲ್ಲದಂತಾಗಿ ಮಾಡಿಕೊಂಡಾಗ ಆ ಮನಸ್ಸು ತನ್ನ ಮೂಲವಾದ ಚೈತನ್ಯಸ್ವರೂಪವಾದ ಆತ್ಮನನ್ನೇ ಸಾಧಕರಿಗೆ ತೋರಿಸುತ್ತದೆ. ಆತ್ಮದರ್ಶನವೇ ತತ್ತ್ವದರ್ಶನವು. ಇದೇ ಸತ್ಯಸಾಕ್ಷಾತ್ಕಾರವೂ ಆಗಿರುತ್ತದೆ.

ಮನಸ್ಸು, ಚಿತ್ತ—ಎರಡೂ ಒಂದೇ. ಮನಸ್ಸು ಅದ್ಭುತವಾದ ಕರಣ. ಈ ಮನಸ್ಸೇ ಸಂಸಾರಿಗಳಿಗೆ ದುಃಖವನ್ನೂ, ಸಾಧಕರಿಗೆ ಆತ್ಮಜ್ಞಾನದ ಸುಖವನ್ನೂ ಉಂಟುಮಾಡುತ್ತದೆ. ಅಜ್ಞಾನಿಗಳು ಯಾವಾಗಲೂ ವಿಷಯಚಿಂತನೆಯನ್ನೇ ಮಾಡುತ್ತಾ ವಿಷಯಧ್ಯಾನದಲ್ಲಿ ಮುಳುಗಿರುತ್ತಾರೆ. ವಿಷಯಗಳನ್ನೇ ಸತ್ಯವೆಂದು ಭ್ರಮಿಸಿ ವಿಷಯಗಳೆಂಬ ವಿಷಚಕ್ರದಲ್ಲಿ ಸಿಕ್ಕಿಕೊಂಡು ಅಜ್ಞರು ನರಳಾಡುತ್ತಾ ಇರುತ್ತಾರೆ. ಇದು ಅವಿವೇಕಿಗಳಾದ ಸಂಸಾರಿಗಳ ಪಾಡು.

ಇನ್ನು ವಿವೇಕಿಗಳಾದ ಸಾಧಕರಾದರೋ; ಇದೇ ಮನಸ್ಸನ್ನು ಶುದ್ಧಮಾಡಿಕೊಂಡು ವೇದಾಂತವಾಕ್ಯಾರ್ಥವಿಚಾರಮಾಡುತ್ತಾ, ಈ ದ್ವೈತಪ್ರಪಂಚವನ್ನು ಮಾಯಾಸ್ವರೂಪವೆಂದು ತಿಳಿದುಕೊಳ್ಳುತ್ತಾರೆ. ವಿವೇಕಯುಕ್ತವಾದ ಮನಸ್ಸಿನಿಂದ ಈ ದೃಶ್ಯವನ್ನೆಲ್ಲ ಅನೃತವೆಂದು ತಿಳಿದುಕೊಂಡಾಗ, ಆ ಮನಸ್ಸಿನ ಮೂಲವಾದ ಆತ್ಮನನ್ನೇ ಮನಸ್ಸು ಸಾಧಕರಿಗೆ ತೋರಿಸುತ್ತದೆ. ಆತ್ಮನನ್ನು ಅರಿತುಕೊಂಡು ಆತ್ಮನಲ್ಲಿಯೇ ನೆಲೆಗೊಂಡರೆ ಅದೇ ತತ್ತ್ವದರ್ಶನವೆನಿಸುತ್ತದೆ. ಇದಕ್ಕೇ ಬ್ರಹ್ಮಾತ್ಮಜ್ಞಾನ, ಪರಮಾರ್ಥದರ್ಶನ, ಸತ್ಯಸಾಕ್ಷಾತ್ಕಾರ ಎಂದೆಲ್ಲಾ ಹೆಸರುಗಳು.

**ಚಿತ್ತ್ವದರ್ಶನದಿಂದ ತತ್ತ್ವದರ್ಶನವಾಗುತ್ತದೆ.**

# 17. ಜಿಜ್ಞಾಸುಗಳ ರಾಜಮಾರ್ಗವಿದು

ಮಾನಸಂ ತು ಕಿಂ ಮಾರ್ಗಣೇ ಕೃತೇ।
ನೈವ ಮಾನಸಂ ಮಾರ್ಗ ಆರ್ಜವಾತ್ ॥ ೧೭ ॥

**ಪದಚ್ಛೇದ:** ಮಾನಸಂ ತು ಕಿಂ ಮಾರ್ಗಣೇ ಕೃತೇ ನ ಏವ ಮಾನಸಂ ಮಾರ್ಗಃ ಆರ್ಜವಾತ್. **ಅನ್ವಯ:** ಮಾನಸಂ ನಾಮ ಕಿಂ ಇತಿ ಮಾರ್ಗಣೇ ಕೃತೇ ಸತಿ ಮಾನಸಂ ನೈವ ವರ್ತತೇ; ಏಷ ಏವ ಆರ್ಜವಃ ಮಾರ್ಗಃ.

**ಅನ್ವಯಾರ್ಥ: ಮಾನಸಂ** = ಮನಸ್ಸು, **ನಾಮ** = ಎಂದರೆ, **ಕಿಂ** = ಏನು, **ಇತಿ** = ಎಂದು, **ಮಾರ್ಗಣೇ** = ಸಂಶೋಧನೆಯನ್ನು, **ಕೃತೇ** = ಮಾಡಿದರೆ, **ಮಾನಸಂ** = ಮನಸ್ಸೆಂಬುದು, **ನೈವ ವರ್ತತೇ** = ಇಲ್ಲವೇ ಇಲ್ಲ. **ಏಷ ಏವ** = ಇದೇ, **ಆರ್ಜವಾತ್** = ನಿಜವಾದ ಹಾಗೂ ನೇರವಾದ, **ಮಾರ್ಗಃ** = ಮಾರ್ಗವು.

**ತಾತ್ಪರ್ಯಾರ್ಥ:** ಮನಸ್ಸೆಂದರೆ ಏನು? ಅದರ ನಿಜಸ್ವರೂಪವೇನು? ಎಂದು ವಿಚಾರಮಾಡುತ್ತಾ ಹೋದರೆ, ಮನಸ್ಸೆಂಬ ವಸ್ತುವೇ ನಿಜವಾಗಿ ಇಲ್ಲವೇ ಇಲ್ಲವೆಂದು ತಿಳಿಯುತ್ತದೆ. ಇದೇ **ಅಮನಸ್ಕಯೋಗವು**, ಇದೇ ಆತ್ಮಜ್ಞಾನದ ರಾಜಮಾರ್ಗ, ಇದೇ ನೇರಾದ ಮಾರ್ಗ.

ಉತ್ತಮಾಧಿಕಾರಿಗಳಿಗೆ ವಿವೇಕದ ರಾಜಮಾರ್ಗವನ್ನು ಇಲ್ಲಿ ಉಪದೇಶಿಸಿದೆ. ಸುಮ್ಮನೆ ಯಾಂತ್ರಿಕವಾಗಿ ಜಪ, ತಪ, ಪೂಜಾದಿಗಳನ್ನು ಮಾಡುವವರು ಮಂದಾಧಿಕಾರಿಗಳು. ಅವರು ಜಿಜ್ಞಾಸುಗಳೂ ಅಲ್ಲ, ಮುಮುಕ್ಷುಗಳಂತೂ ಅಲ್ಲವೇ ಅಲ್ಲ. ಅವರಿಗೆ ಬೇಕಾಗಿರುವ ಫಲಗಳೆಂದರೆ ಆಯುರಾರೋಗ್ಯಧನ ಧಾನ್ಯಾದಿ ಪರಿಚ್ಛಿನ್ನಫಲಗಳು.

ಆದರೆ ಮುಮುಕ್ಷುಗಳೇ ಉತ್ತಮಾಧಿಕಾರಿಗಳು. ಇವರಿಗೆ ಬೇಕಾದ ಫಲವೆಂದರೆ ಆತ್ಮಜ್ಞಾನ, ಮೋಕ್ಷ. ಇವರೇ ನಿಜವಾದ ಸಾಧಕರು. ಇವರೇ ವಿವೇಕಿಗಳು ಹಾಗೂ ಮೇಧಾವಿಗಳು. ಇಂಥವರಿಗೆ ಭಗವಾನ್ ಶ್ರೀರಮಣರು ಇಲ್ಲಿ ಆತ್ಮಜ್ಞಾನದ ರಾಜಮಾರ್ಗವನ್ನು ಉಪದೇಶಿಸಿದ್ದಾರೆ. ಮನಸ್ಸನ್ನು ಬಳಸಿಕೊಂಡು ಸಾಮಾನ್ಯಸಾಧಕರು ಸಾಧನಗಳನ್ನು ಮಾಡುತ್ತಾರೆ. ಆದರೆ ಬುದ್ಧಿವಂತರಾದ ಸಾಧಕರು ಈ ಮನಸ್ಸನ್ನೇ ವಿಚಾರಮಾಡುತ್ತಾರೆ. ಹೀಗೆ ವಿಚಾರಮಾಡುತ್ತಾ ಹೋದರೆ ಮನಸ್ಸೆಂಬ ವಸ್ತುವು ನಿಜವಾಗಿ ಆತ್ಮನಿಗಿಂತ ಭಿನ್ನವಾಗಿ ಇಲ್ಲವೆಂದೂ, ಆತ್ಮನೇ ಮನಸ್ಸಾಗಿ ತೋರುತ್ತಿದ್ದಾನೆಂದೂ ಅರ್ಥವಾಗಿಬಿಡುತ್ತದೆ.

**ವಿಚಾರಮಾಡಿದರೆ ಮನಸ್ಸೆಂಬುದು ಇಲ್ಲವೇ ಇಲ್ಲ.**

## 18. ವೃತ್ತಿಗಳೆಲ್ಲಕ್ಕೂ ಅಹಂವೃತ್ತಿಯೇ ಮೂಲ

ವೃತ್ತಯಸ್ತ್ವಹಂವೃತ್ತಿಮಾಶ್ರಿತಾಃ।
ವೃತ್ತಯೋ ಮನೋ ವಿದ್ಧ್ಯಹಂ ಮನಃ ॥ ೧೮ ॥

**ಪದಚ್ಛೇದ:** ವೃತ್ತಯಃ ತು ಅಹಂವೃತ್ತಿಮ್ ಆಶ್ರಿತಾಃ ವೃತ್ತಯಃ ಮನಃ ವಿದ್ಧಿ ಅಹಂ ಮನಃ.

**ಅನ್ವಯ:** ವೃತ್ತಯಃ ಅಹಂವೃತ್ತಿಮ್ ಆಶ್ರಿತಾಃ, ವೃತ್ತಯಃ ಏವ ಮನಃ ಅಹಂವೃತ್ತಿಂ ಮನಃ ವಿದ್ಧಿ.

**ಅನ್ವಯಾರ್ಥ:** **ವೃತ್ತಯಃ** = ವೃತ್ತಿಗಳು, **ತು** = ಆದರೋ, **ಅಹಂ ವೃತ್ತಿಮ್** = 'ನಾನು' ಎಂಬ ವೃತ್ತಿಯನ್ನು, **ಆಶ್ರಿತಾಃ** = ಆಶ್ರಯಿಸಿರುತ್ತವೆ. **ವೃತ್ತಯಃ ಏವ** = ವೃತ್ತಿಗಳೇ, **ಮನಃ** = ಮನಸ್ಸು, ಆದ್ದರಿಂದ, **ಅಹಂವೃತ್ತಿಂ** = ಅಹಂ ಎಂಬ ವೃತ್ತಿಯನ್ನು, **ಮನಃ** ಮನಸ್ಸು ಎಂದು, **ವಿದ್ಧಿ** = ತಿಳಿ.

**ತಾತ್ಪರ್ಯಾರ್ಥ:** ಮನಸ್ಸಿನ ವೃತ್ತಿಗಳೆಲ್ಲಕ್ಕೂ ಅಹಂವೃತ್ತಿಯೇ ಮೂಲವಾಗಿರುತ್ತದೆ. ಅಹಂವೃತ್ತಿಯು ಬಂದರೇ ಇತರ ಎಲ್ಲಾ ವೃತ್ತಿಗಳೂ ತೋರುತ್ತವೆ. ನಿಜವೇನೆಂದರೆ: ವೃತ್ತಿಗಳೆಂದರೆ ಮನಸ್ಸೇ. ಆದ್ದರಿಂದ ಅಹಂವೃತ್ತಿಯನ್ನೇ ಮನಸ್ಸೆಂದು ತಿಳಿಯಬೇಕು.

ಮನಸ್ಸಿನಲ್ಲಿ ಕ್ಷಣಕ್ಷಣಕ್ಕೂ ವೃತ್ತಿಗಳು ಏಳುತ್ತಲೇ ಇರುತ್ತವೆ. ಯಾವುದೇ ವಸ್ತುಗಳನ್ನು ನೋಡಿದರೂ, ಕೇಳಿದರೂ, ಸ್ಮರಿಸಿದರೂ ಅವುಗಳ ವೃತ್ತಿಗಳು ಮನದಲ್ಲಿ ಏಳಬೇಕಲ್ಲವೇ? ಈ ಮನೋವೃತ್ತಿಗಳಿಗೆಲ್ಲ ಆಧಾರವಾದದ್ದು **ಅಹಂವೃತ್ತಿಯು**. ಅಹಂವೃತ್ತಿಯು ಏಳದೇಹೋದರೆ ಉಳಿದ ಇತರ ಯಾವ ವೃತ್ತಿಗಳೂ ಮನಸ್ಸಿನಲ್ಲಿ ಏಳಲಾರವು ಹಾಗೂ ತೋರಲಾರವು ಅಹಂವೃತ್ತಿಯೇ ಎಲ್ಲಾ ವೃತ್ತಿಗಳಿಗೂ ಆಶ್ರಯವಾಗಿರುತ್ತದೆ.

ನಿಜವೇನೆಂದರೆ ವೃತ್ತಿಗಳೇ ಮನಸ್ಸು, ಮನಸ್ಸೇ ವೃತ್ತಿಗಳು. ಮನಸ್ಸಿನಲ್ಲಿ ವೃತ್ತಿಗಳು ಎಂಬುದು ಉಪಚಾರದ ಮಾತು. ವೃತ್ತಿಗಳಿಗಿಂತ ಭಿನ್ನವಾಗಿ ಮನಸ್ಸಾಗಲೀ, ಮನಸ್ಸಿಗಿಂತ ಭಿನ್ನವಾಗಿ ವೃತ್ತಿಗಳಾಗಲೀ ಇಲ್ಲವೇ ಇಲ್ಲ. ಅಹಂ ಎಂಬುದೂ ಮನಸ್ಸೇ ಆಗಿರುತ್ತದೆ. ಹೀಗಾಗಿ ಅಹಂವೃತ್ತಿಯೇ ನಾಶವಾಗಿಬಿಟ್ಟರೆ ಉಳಿದ ವೃತ್ತಿಗಳೆಲ್ಲವೂ ನಾಶವಾದಂತೆಯೇ. ಆದ್ದರಿಂದ ವಿವೇಕಿಸಾಧಕನು ಆತ್ಮನಲ್ಲಿ ಅಹಂವೃತ್ತಿಯನ್ನು ಕರಗಿಸಿಕೊಳ್ಳಬೇಕು.

**ಅಹಂ ಕರಗಿದರೆ ಅಂತಃಕರಣವೇ ಇಲ್ಲವಾಗುತ್ತದೆ.**

# 19. ಆತ್ಮನೇ ಅಹಂವೃತ್ತಿಗೆ ಮೂಲ

ಅಯಮಹಂ ಕುತೋ ಭವತಿ ಚಿನ್ವತಃ।
ಅಯಿ ಪತತ್ಯಹಂ ನಿಜವಿಚಾರಣಮ್ ॥ ೧೯ ॥

**ಪದಚ್ಛೇದ:** ಅಯಂ ಅಹಂ ಕುತಃ ಭವತಿ ಚಿನ್ವತಃ ಅಯಿ ಪತತಿ ಅಹಂ ನಿಜವಿಚಾರಣಮ್.

**ಅನ್ವಯ:** ಅಯಂ ಅಹಂ ಕುತಃ ಭವತಿ ಇತಿ ಚಿನ್ವತಃ ಅಯಿ ಅಹಂ ಪತತಿ. ಇದಮೇವ ನಿಜವಿಚಾರಣಮ್.

**ಅನ್ವಯಾರ್ಥ:** **ಅಯಂ** = ಈ, **ಅಹಂ** = ಅಹಂವೃತ್ತಿಯು, **ಕುತಃ** = ಎಲ್ಲಿಂದ, **ಭವತಿ** = ಬರುತ್ತಿದೆ? **ಇತಿ** = ಎಂದು, **ಚಿನ್ವತಃ** = ಹುಡುಕುವ ಸಾಧಕನಿಗೆ, **ಅಯಿ** = ಅಯ್ಯೋ ಪಾಪ, **ಅಹಂ** = ಅಹಂವೃತ್ತಿಯು, **ಪತತಿ** = ಬಿದ್ದುಹೋಗುತ್ತದೆ. **ಇದಮೇವ** = ಇದೇ, **ನಿಜವಿಚಾರಣಮ್** = ಆತ್ಮವಿಚಾರ.

**ತಾತ್ಪರ್ಯಾರ್ಥ:** ಅಹಂವೃತ್ತಿಯು ಎಲ್ಲಿಂದ ಬರುತ್ತದೆ? ಎಂದು ಹುಡುಕುತ್ತಾ ಹೊರಟರೆ, ಆ ಅಹಂವೃತ್ತಿಯೇ ಇಲ್ಲವಾಗಿಬಿಡುತ್ತದೆ. ಅಹಂ ವೃತ್ತಿಯೇ ನಾಶವಾಗಿಬಿಡುತ್ತದೆ. ಆ ಕೂಡಲೇ ಆತ್ಮನೊಬ್ಬನೇ ಉಳಿದುಕೊಂಡು ಬಿಡುತ್ತಾನೆ. ಇದಕ್ಕೇ ಆತ್ಮವಿಚಾರಣ ಎಂದು ಹೆಸರು.

ವೇದಾಂತದಲ್ಲಿ ಅಧ್ಯಾತ್ಮಸಾಧಕರುಗಳಿಗೆ 'ಆತ್ಮವಿಚಾರವನ್ನು ಮಾಡಬೇಕು' ಎಂದು ಉಪದೇಶಿಸಿದೆ. ಆತ್ಮನನ್ನು ಹುಡುಕುವುದು ಆತ್ಮವಿಚಾರವಲ್ಲ; ಏಕೆಂದರೆ ಆತ್ಮನೇ ತಾನಾದ್ದರಿಂದ, ತಾನೇ ಆತ್ಮನೂ ಆದ್ದರಿಂದ, ಸಾಕ್ಷಾತ್ ಅಪರೋಕ್ಷನಾದ ಆತ್ಮನನ್ನು ಹುಡುಕಲು ಸಾಧ್ಯವೇ ಇಲ್ಲ. ಹುಡುಕುವವನ ಸ್ವರೂಪನೇ ಆಗಿರುವ ಪ್ರತ್ಯಗಾತ್ಮನನ್ನು ಹುಡುಕಬೇಕಾಗಿಯೂ ಇಲ್ಲ. ಆದ್ದರಿಂದ **ಆತ್ಮವಿಚಾರ** ಎಂದರೆ ಅಹಂಕಾರದ ಮೂಲವನ್ನು ಹುಡುಕುವುದು ಎಂದೇ ಅರ್ಥ.

ಪ್ರತಿಯೊಬ್ಬರ ಜೀವನದಲ್ಲಿಯೂ 'ನಾನು', 'ನಾನು'—ಎಂಬ ಪ್ರತ್ಯಯ ಗಳು ಸದಾ ಏಳುತ್ತಲೇ ಇರುತ್ತವೆ. ಈ 'ನಾನು' ಎಂಬ ವೃತ್ತಿಯು ಎಲ್ಲಿಂದ ಏಳುತ್ತಿದೆ? ಎಲ್ಲಿ ಇರುತ್ತದೆ? ಹಾಗೂ ಎಲ್ಲಿ ಅಡಗುತ್ತದೆ? ಎಂಬಿದನ್ನು ವಿಚಾರ ಮಾಡಲು ತೊಡಗಿದರೆ ಅಹಂವೃತ್ತಿಯು ಇಲ್ಲವಾಗಿಬಿಡುತ್ತದೆ. ಏಕೆಂದರೆ ಆತ್ಮನೇ ಅಹಂವೃತ್ತಿಯಾಗಿ ತೋರುತ್ತಿದ್ದಾನೆ. ಆತ್ಮನಿಗಿಂತ ಭಿನ್ನವಾಗಿ ಅಹಂವೃತ್ತಿಯು ಸ್ವತಂತ್ರವಾಗಿ ಇರಲಾರದಲ್ಲವೇ?

**ಅಹಂವೃತ್ತಿಯ ವಿಚಾರದ ಮೂಲಕ ಆತ್ಮನ ದರ್ಶನವಾಗುತ್ತದೆ.**

# 20. ಆತ್ಮನು ಸ್ವಯಂಪ್ರಕಾಶಸ್ವರೂಪನು

ಅಹಮಿ ನಾಶಭಾಜ್ಯಹಮಹಂತಯಾ।
ಸ್ಫುರತಿ ಹೃತ್ಸ್ವಯಂ ಪರಮಪೂರ್ಣಸತ್ ॥ ೨೦ ॥

**ಪದಚ್ಛೇದ:** ಅಹಮಿ ನಾಶಭಾಜಿ ಅಹಂ ಅಹಂತಯಾ ಸ್ಫುರತಿ ಹೃತ್ ಸ್ವಯಂ ಪರಮಪೂರ್ಣಸತ್.

**ಅನ್ವಯ:** ಅಹಮಿ ನಾಶಭಾಜಿ ಸತಿ ಹೃತ್ ಅಹಂ ಅಹಮಿತಿ ಸ್ವಯಂ ಸ್ಫುರತಿ; ಇದಮೇವ ಪರಮಪೂರ್ಣಸತ್.

**ಅನ್ವಯಾರ್ಥ:** **ಅಹಮಿ** = ಅಹಂವೃತ್ತಿಯು, **ನಾಶಭಾಜಿ ಸತಿ** = ನಾಶವನ್ನು ಹೊಂದಲಾಗಿ, **ಹೃತ್** = ಹೃದಯ ಎಂಬ ಆತ್ಮನು, **ಅಹಂ ಅಹಮಿತಿ** = ನಾನು ನಾನು ಎಂದು, **ಸ್ವಯಂ** = ತಾನೇ ತಾನಾಗಿ, **ಸ್ಫುರತಿ** = ಹೊಳೆಯುತ್ತಾನೆ. **ಇದಮೇವ** = ಇದೇ, **ಪರಮಪೂರ್ಣಸತ್** = ಪರಮವೂ ಪೂರ್ಣವೂ ಆದ ಸತ್‌ಸ್ವರೂಪವಾಗಿರುತ್ತದೆ.

**ತಾತ್ಪರ್ಯಾರ್ಥ:** ಅಹಂವೃತ್ತಿಯು ಆತ್ಮನಲ್ಲಿ ಕರಗಿಹೋಗಿ, ನಾಶವಾದ ಕೂಡಲೇ ಆತ್ಮನು ಸ್ವಯಂಜ್ಯೋತಿಃಸ್ವರೂಪನಾಗಿ ನಾನು ನಾನು ಎಂಬ ರೂಪದಿಂದ ಬೆಳಗುತ್ತಾನೆ. ಇವನೇ ಸಚ್ಚಿದಾನಂದಸ್ವರೂಪವಾದ ಪರಬ್ರಹ್ಮತತ್ತ್ವವು.

ಆತ್ಮನು ತೋರಿಕೊಳ್ಳುವುದಕ್ಕೆ ಅಹಂವೃತ್ತಿಯೇ ಅಡ್ಡಿಯಾಗಿರುತ್ತದೆ. ಅಹಂ ಮತ್ತು ವೃತ್ತಿ ಎಂದು ಎರಡು ಸತ್ಯವಾದ ವಸ್ತುಗಳಿಲ್ಲ. ಆತ್ಮನನ್ನು ಸರಿಯಾಗಿ ತಿಳಿಯದೇ ಇದ್ದದ್ದರಿಂದಲೇ ಅಹಂವೃತ್ತಿಯು ಮೆರೆಯುತ್ತಿದೆ. ಅಹಂವೃತ್ತಿಯು ಮೆರೆಯುತ್ತಿರುವುದರಿಂದಲೇ ಮೂಲಸ್ವರೂಪನಾದ ಆತ್ಮನು ಅರ್ಥವಾಗುತ್ತಿಲ್ಲ. ಬಂಗಾರವೇ ಆಭರಣಗಳಾಗಿ ತೋರುತ್ತಿದೆಯಲ್ಲವೇ? ಆಭರಣಗಳನ್ನೆಲ್ಲ ಬಿಟ್ಟು, ಅವುಗಳಿಗೆಲ್ಲ ಮೂಲವಾದ ಬಂಗಾರವನ್ನು ನೋಡುವಾಗ ಅದೊಂದೇ ಸತ್ಯವಾಗಿ ತೋರುತ್ತದೆಯಲ್ಲವೇ?

ಹೀಗೆಯೇ 'ಅಹಂವೃತ್ತಿಯು' ನಾಶವಾದ ಕೂಡಲೇ, ಅಹಂವೃತ್ತಿಗೆ ಮೂಲನಾದ ಆತ್ಮನೇ 'ನಾನು', 'ನಾನು' ಎಂಬ ರೂಪದಿಂದ ಸರ್ವದಾ ಪ್ರಕಾಶಿಸುತ್ತಾ ಇರುತ್ತಾನೆ. ಅಹಂವೃತ್ತಿಯು ಒಂದು ಔಪಾಧಿಕಸ್ವರೂಪ. ಉಪಾಧಿಗಳನ್ನು ಬಿಟ್ಟು ಮೂಲಸ್ವರೂಪವನ್ನು ನೋಡಲು ಹೊರಟಾಗ ಆ ಮೂಲನಾದ ಆತ್ಮನೇ ಸತ್ ಚಿತ್ ಆನಂದಸ್ವರೂಪನೆಂದೂ, ಆ ಆತ್ಮನೇ ತಾನೆಂದೂ, ಸಹಜವಾಗಿ ತಿಳಿದು ಬಿಡುತ್ತದೆ. ಈ ಆತ್ಮನೇ ಪರಬ್ರಹ್ಮವೂ ಆಗಿರುತ್ತಾನೆ.

**ಅಹಂವೃತ್ತಿಯು ನಾಶವಾದರೆ ಆತ್ಮನು ಪ್ರಕಾಶಿಸುತ್ತಾನೆ.**

## 21. ಆತ್ಮನು ಸುಷುಪ್ತಿಯಲ್ಲಿ ಇದ್ದಾನೆ

ಇದಮಹಂಪದಾಭಿಖ್ಯಮನ್ವಹಮ್ ।
ಅಹಮಿ ಲೀನಕೇಽಪ್ಯಲಯಸತ್ತಯಾ ॥ ೨೧ ॥

**ಪದಚ್ಛೇದ:** ಇದಂ ಅಹಂಪದಾಭಿಖ್ಯಂ ಅನ್ವಹಂ ಅಹಮಿ ಲೀನಕೇ ಅಪಿ ಅಲಯಸತ್ತಯಾ.

**ಅನ್ವಯ:** ಅಹಂಪದಾಭಿಖ್ಯಂ ಇದಂ ಅಹಮಿ ಲೀನಕೇ ಅಪಿ ಅನ್ವಹಂ ಅಲಯಸತ್ತಯಾ ಸ್ಫುರತಿ.

**ಅನ್ವಯಾರ್ಥ: ಅಹಂಪದಾಭಿಖ್ಯಂ** = ನಾನು ಎಂಬ ಪದದಿಂದ ಕರೆಯಲ್ಪಡುತ್ತಿರುವ, **ಇದಂ** = ಈ ಹೃದಯವೆಂಬ ಆತ್ಮತತ್ತ್ವವು, **ಅಹಮಿ** = ಅಹಂವೃತ್ತಿಯು, **ಲೀನಕೇ ಅಪಿ** = ಲೀನವಾದರೂ, **ಅನ್ವಹಂ** = ಯಾವಾಗಲೂ, **ಅಲಯಸತ್ತಯಾ** = ತಾನು ಸ್ವತಃ ಲಯವಾಗದೇ ಇರುವಿಕೆಯ ರೂಪದಿಂದ ಪ್ರಕಾಶಿಸುತ್ತಲೇ ಇರುತ್ತದೆ.

**ತಾತ್ಪರ್ಯಾರ್ಥ:** ಆತ್ಮನನ್ನೇ ಅವಿವೇಕಿಗಳು 'ಅಹಂ' ಎಂದು ಕರೆಯುತ್ತಿದ್ದಾರೆ. ಅಜ್ಞರು **ಅಹಂ** ಎಂದು ಕರೆಯುತ್ತಿದ್ದರೂ ಅದು ನಿಜವಾಗಿ ಪ್ರತ್ಯಗಾತ್ಮನೇ ಆಗಿರುತ್ತದೆ. ಅಹಂವೃತ್ತಿಯು ಯಾವಾಗಲೂ ಇರುವುದಿಲ್ಲ; ಉದಾಹರಣೆಗೆ: ಗಾಢನಿದ್ರೆಯಲ್ಲಿ 'ಅಹಂವೃತ್ತಿ'ಯು ಇರಲಾರದಲ್ಲವೇ? ಆದರೆ ಸುಷುಪ್ತಿಯಲ್ಲಿಯೂ ಆತ್ಮನು ಮಾತ್ರ ಸ್ವತಃ ಲಯವಾಗದೇ ಸ್ವಯಂಜ್ಯೋತಿಃಸ್ವರೂಪನಾಗಿ ಬೆಳಗುತ್ತಲೇ ಇರುತ್ತಾನಲ್ಲವೇ?

ಮೂರವಸ್ಥೆಗಳಲ್ಲಿಯೂ ಕೂಟಸ್ಥನಿತ್ಯನಾಗಿ ನಿರ್ವಿಕಾರಸ್ವರೂಪನಾಗಿ ಆತ್ಮನು ಇದ್ದೇ ಇರುತ್ತಾನೆ. ಇವನಿಗೇ ಹೃದಯ ಎಂದೂ ಹೆಸರು. ಎಚ್ಚರವು ತೋರುವಾಗಲೂ, ಎಚ್ಚರವು ಹೋಗಿ ಸ್ವಪ್ನವು ತೋರುವಾಗಲೂ, ಎಚ್ಚರ ಕನಸುಗಳೆರಡೂ ಮಾಯವಾಗಿ ಕೇವಲ ಸುಷುಪ್ತಿ ತೋರುವಾಗಲೂ ಆತ್ಮನು ಮಾತ್ರ ಒಂದೇ ಸ್ವರೂಪದಿಂದ ತೋರುತ್ತಾ, ಬೆಳಗುತ್ತಾ ಇರುತ್ತಾನೆ. ಆದರೆ ಎಚ್ಚರದ ಅಹಂವೃತ್ತಿಯು ಸ್ವಪ್ನದಲ್ಲಿ ಇರುವುದಿಲ್ಲ, ಸ್ವಪ್ನದ ಅಹಂವೃತ್ತಿಯು ಎಚ್ಚರದಲ್ಲಿ ಇರುವುದಿಲ್ಲ. ಸುಷುಪ್ತಿಯಲ್ಲಂತೂ ಅಹಂವೃತ್ತಿಯ ಗಂಧವೂ ಇರುವುದಿಲ್ಲ. ಹೀಗೆ ಅಹಂವೃತ್ತಿಗೆ ಬದಲಾವಣೆಗಳು ಆಗುತ್ತಲೇ ಇರುತ್ತವೆ. ಆದರೆ ಅಹಂವೃತ್ತಿಗೆ ಆಸ್ಪದನೂ, ಸಾಕ್ಷಿಯೂ, ಸ್ವರೂಪನೂ ಆದ ಆತ್ಮನಲ್ಲಿ ಮಾತ್ರ ಯಾವ ಬದಲಾವಣೆಗಳೂ ಇರುವುದಿಲ್ಲ.

**ಆತ್ಮನಿಗೆ ಎಂದೆಂದಿಗೂ ನಾಶವೆಂಬುದೇ ಇರುವುದಿಲ್ಲ.**

# 22. ಅಸತ್ತಾದ ದೇಹಾದಿಗಳು ಅನಾತ್ಮವೇ

ವಿಗ್ರಹೇಂದ್ರಿಯಪ್ರಾಣಧೀತಮಃ।
ನಾಹಮೇಕಸತ್ತಜ್ಜಡಂ ಹ್ಯಸತ್ ॥ ೨೨ ॥

**ಪದಚ್ಛೇದ:** ವಿಗ್ರಹ ಇಂದ್ರಿಯ ಪ್ರಾಣ ಧೀ ತಮಃ ನ ಅಹಂ ಏಕಸತ್ ತತ್ ಜಡಂ ಹಿ ಅಸತ್.

**ಅನ್ವಯ:** ವಿಗ್ರಹ ಇಂದ್ರಿಯ ಪ್ರಾಣ ಧೀ ತಮಃ ನ ಅಹಂ ಏಕಸತ್ ಹಿ ತತ್ ಜಡಂ ಅಸತ್.

**ಅನ್ವಯಾರ್ಥ: ವಿಗ್ರಹ ಇಂದ್ರಿಯ ಪ್ರಾಣ ಧೀ ತಮಃ** = ಶರೀರ ಇಂದ್ರಿಯಗಳು ಪ್ರಾಣ ಬುದ್ಧಿ ಅಜ್ಞಾನಗಳು ಇದಾವುದೂ, **ನ ಅಹಂ** = ನಾನಲ್ಲ; **ಏಕಸತ್** = ನಾನು ಅದ್ವಿತೀಯನಾದ ಸತ್‌ಸ್ವರೂಪನಾದ ಆತ್ಮನೇ ಆಗಿರುತ್ತೇನೆ. ಆ ದೇಹಾದಿಗಳಾವುದೂ ನಾನಲ್ಲ. **ಹಿ** = ಏಕೆಂದರೆ, **ತತ್** = ಅದು, **ಜಡಂ** = ಅಚೇತನವಾಗಿರುತ್ತದೆ. ಮತ್ತು **ಅಸತ್** = ಅಸತ್ಯವೂ ಎಂದರೆ ಅನೃತವೂ ಆಗಿರುತ್ತದೆ. **ತಾತ್ಪರ್ಯಾರ್ಥ:** ದೇಹ ಇಂದ್ರಿಯ, ಪ್ರಾಣ, ಬುದ್ಧಿ ಮತ್ತು ಅಜ್ಞಾನ—ಇದಾವುದೂ ಆತ್ಮನಲ್ಲ. ಏಕೆಂದರೆ ಇವುಗಳು ಜಡವೂ ಅಸತ್ಯವೂ ಆಗಿರುತ್ತವೆ. ಹಾಗಾದರೆ ನಾನು ಯಾರು? ಎಂದರೆ **ಏಕಸತ್ ಅಹಂ ಅಸ್ಮಿ**, ಒಂದೇ ಒಂದಾಗಿರುವ ಸತ್‌ಸ್ವರೂಪನೇ ನಾನಾಗಿರುತ್ತೇನೆ. ನಾನು ಕೂಟಸ್ಥ ನಿತ್ಯನೂ ಚಿನ್ಮಾತ್ರಸ್ವರೂಪನೂ ಆದ ಆತ್ಮನಾಗಿರುತ್ತೇನೆ.

ಈ ಶ್ಲೋಕದಲ್ಲಿ ಶ್ರೀರಮಣರು ಆತ್ಮಾನಾತ್ಮವಿವೇಚನೆಯನ್ನು ತೋರಿಸಿದ್ದಾರೆ. ಸಾಮಾನ್ಯವಾಗಿ ಎಲ್ಲಾ ಅಜ್ಞರೂ ದೇಹಾದಿಗಳನ್ನೇ ತಾನೆಂದು ತಿಳಿದಿರುತ್ತಾರೆ. ಸರಿಯಾಗಿ ವಿಚಾರಮಾಡಿನೋಡಿದರೆ ಶರೀರಾದಿಗಳು ತಾನಲ್ಲವೆಂದೂ ಆತ್ಮನೇ ತಾನೆಂದೂ ತಿಳಿಯುತ್ತದೆ.

ಹಾಗಾದರೆ ನಾನು ಎಂಬುದು ಕೇವಲ ಶೂನ್ಯತತ್ತ್ವವೇ? ಎಂದರೆ, ಹಾಗಲ್ಲ, ಆತ್ಮನು ಶೂನ್ಯವೂ ಅಲ್ಲ, ಜಡವೂ ಅಲ್ಲ, ಅಸತ್ಯವೂ ಅಲ್ಲ; ಮತ್ತೇನೆಂದರೆ: **ಏಕಸತ್ ಅಹಮಸ್ಮಿ**, ಏಕನೂ ಸತ್‌ಸ್ವರೂಪನಾದ ಆತ್ಮನೂ ನಾನಾಗಿರುತ್ತೇನೆ. ಇದನ್ನೇ ಉಪನಿಷತ್ತುಗಳಲ್ಲಿ **ಏಕಮೇವಾದ್ವಿತೀಯಂ**, ಒಂದೇ ಆಗಿರುವ, ಅದ್ವಿತೀಯ ಸ್ವರೂಪನೇ ಆತ್ಮನೆಂದು ಹೇಳಿರುತ್ತದೆ. ಹೀಗೆ ಅನಾತ್ಮವಾದ ದೇಹಾದಿಗಳನ್ನು ತಾನಲ್ಲವೆಂದೂ ಸಚ್ಚಿದಾನಂದಸ್ವರೂಪನಾದ ಆತ್ಮನೇ ತಾನೆಂದೂ ತಿಳಿದವನೇ ಆತ್ಮವಿದನು.

**ದೇಹಾದಿಗಳು ಆತ್ಮನಲ್ಲ, ಸನ್ಮಾತ್ರನೇ ತಾನೆಂದು ತಿಳಿಯಬೇಕು.**

# 23. ಅರಿವೇ ಇರವಿನ ಸ್ವರೂಪ

ಸತ್ತ್ವಭಾಸಿಕಾ ಚಿತ್ ಕ್ವ ವೇತರಾ।
ಸತ್ತಯಾ ಹಿ ಚಿತ್ ಚಿತ್ತಯಾ ಹ್ಯಹಮ್ ॥ ೨೩ ॥

**ಪದಚ್ಛೇದ:** ಸತ್ತ್ವಭಾಸಿಕಾ ಚಿತ್ ಕ್ವ ವಾ ಇತರಾ ಸತ್ತಯಾ ಹಿ ಚಿತ್ ಚಿತ್ತಯಾ ಹಿ ಅಹಮ್.

**ಅನ್ವಯ:** ಸತ್ತ್ವಭಾಸಿಕಾ ಚಿತ್, ಇತರಾ ಚಿತ್ ಕ್ವ ವಾ ಅಸ್ತಿ? ಚಿತ್ ಸತ್ತಯಾ ಹಿ ಅಸ್ತಿ, ಅಹಂ ಚಿತ್ತಯಾ ಹಿ ಅಸ್ಮಿ.

**ಅನ್ವಯಾರ್ಥ: ಸತ್ತ್ವಭಾಸಿಕಾ** = ಇರುವುದನ್ನು ಬೆಳಗುತ್ತಿರುವುದೇ, **ಚಿತ್** = ಚೈತನ್ಯವು. ಈ ಚೈತನ್ಯಕ್ಕಿಂತ, **ಇತರಾ** = ಬೇರೆಯಾದ ಅರಿವು, **ಕ್ವ ವಾ** = ಎಲ್ಲಿ ತಾನೆ ಇದೆ? ಎಂದರೆ ಬೇರೆಯಾದ ಅರಿವು ಇಲ್ಲ ಎಂದರ್ಥ. **ಚಿತ್** = ಅರಿವೇ, **ಸತ್ತಯಾ** = ಸದ್‌ರೂಪದಿಂದ, **ಅಸ್ತಿ ಹಿ** = ಇದೆಯಲ್ಲವೇ? **ಅಹಂ** = ನಾನು, **ಚಿತ್ತಯಾ** = ಅರಿವಿನರೂಪದಿಂದ, **ಅಸ್ಮಿ** = ಇರುತ್ತೇನೆ.

**ತಾತ್ಪರ್ಯಾರ್ಥ:** ಅರಿವೆಂಬುದು ಇರುವಿಕೆಯನ್ನು ಬೆಳಗುತ್ತಾ ಇದೆ. ಇದೊಂದೇ ಆತ್ಮಸ್ವರೂಪದ ಅರಿವು. ಈ ಅರಿವಿಗಿಂತ ಬೇರೆಯಾದ ವೃತ್ತಿರೂಪವಾದ ಬೇರೊಂದು ಅರಿವೆಂಬುದು ಇಲ್ಲವೇ ಇಲ್ಲ. ಚಿತ್‌ಸ್ವರೂಪವೇ ಸದ್ರೂಪದಿಂದಲೂ, ಸದ್‌ರೂಪನಾದ ಆತ್ಮನೇ ಚಿದ್‌ರೂಪದಿಂದಲೂ ತೋರುತ್ತಿದ್ದಾನೆ. ಚಿದ್ರೂಪವಾದ ಆತ್ಮನೇ ನಾನಾಗಿದ್ದೇನೆ.

ಆತ್ಮನು ಸತ್, ಚಿತ್, ಆನಂದರೂಪನಾಗಿದ್ದಾನೆ. **ಸತ್** ಎಂದರೆ ಇರುವಿಕೆ, **ಚಿತ್** ಎಂದರೆ ಅರಿವಿನ ಸ್ವರೂಪ, **ಆನಂದ** ಎಂದರೆ ಸುಖದುಃಖರಹಿತವಾದ ಸಹಜ ಆನಂದ ಸ್ಥಿತಿ. ಸತ್ ಚಿತ್ ಆನಂದಗಳೆಂದು ಮೂರು ಭಿನ್ನಭಿನ್ನ ಸ್ವರೂಪಗಳಿಲ್ಲ; ಅರಿವೇ ಇರವು, ಇರವೇ ಅರಿವು, ಅರಿವೇ ಆನಂದ. ಈ ಮೂರೂ ಒಬ್ಬನೇ ಆತ್ಮನ ಪರಮಾರ್ಥಸ್ವರೂಪವಾಗಿರುತ್ತದೆ. ನಾನು ವೃತ್ತಿರೂಪನಾದ ಅಸತ್ಯ ಆತ್ಮನಲ್ಲ. ಅಂತಃಕರಣದ ವೃತ್ತಿಗಳೆಲ್ಲವೂ ಕ್ಷಣಕ್ಷಣಕ್ಕೂ ಬದಲಾವಣೆಯಾಗುತ್ತಾ ಹೋಗುತ್ತವೆ. ಆದರೆ ಈ ವೃತ್ತಿಗಳೆಲ್ಲಕ್ಕೂ ಮೂಲ ಸ್ವರೂಪನಾದ ಆತ್ಮನು ಮಾತ್ರ ಒಬ್ಬನೇ. ಈ ಆತ್ಮನೇ ನಮ್ಮೆಲ್ಲರ ಪರಮಾರ್ಥ ಸ್ವರೂಪನಾಗಿರುತ್ತಾನೆ. ಸಕಲ ಜೀವರಾಶಿಗಳಿಗೂ ಸಚ್ಚಿದಾನಂದಸ್ವರೂಪನಾದ ಆತ್ಮನು ಸಮಾನನಾಗಿರುತ್ತಾನೆ. ಇವನೇ ಎಲ್ಲರ ಪ್ರತ್ಯಗಾತ್ಮನು.

**ತನ್ನನ್ನು ಚಿನ್ಮಾತ್ರಸ್ವರೂಪನೆಂದು ತಿಳಿಯಬೇಕು.**

# 24. ಉಪಾಧಿಯಿಂದ ಜೀವೇಶ್ವರಭೇದ

ಈಶಜೀವಯೋರ್ವೇಷಧೀಭಿದಾ ।
ಸತ್ಸ್ವಭಾವತೋ ವಸ್ತು ಕೇವಲಮ್ ॥ ೨೪ ॥

**ಪದಚ್ಛೇದ:** ಈಶಜೀವಯೋಃ ವೇಷಧೀಭಿದಾ ಸತ್‌ಸ್ವಭಾವತಃ ವಸ್ತು ಕೇವಲಮ್.

**ಅನ್ವಯ:** ಈಶಜೀವಯೋಃ ವೇಷಧೀಭಿದಾ ಸತ್‌ಸ್ವಭಾವತಃ ವಸ್ತು ಕೇವಲಮ್.

**ಅನ್ವಯಾರ್ಥ:** **ಈಶಜೀವಯೋಃ** = ಈಶ್ವರನಿಗೂ ಜೀವನಿಗೂ, **ವೇಷಧೀಭಿಧಾ** = ಉಪಾಧಿಗಳೆಂಬ ವೇಷದ ದೃಷ್ಟಿಯಿಂದಲೇ ಭೇದವು ತೋರುತ್ತಿದೆ. **ಸತ್‌ಸ್ವಭಾವತಃ** = ಸದ್ರೂಪನಾದ ಆತ್ಮನ ಸ್ವಭಾವದಿಂದ ನೋಡಿದರೆ, **ವಸ್ತು ಕೇವಲಮ್** = ಆತ್ಮನೊಬ್ಬನು ಮಾತ್ರವೇ ಸತ್ಯ. ಜೀವಾತ್ಮ ಪರಮಾತ್ಮರೆಂಬ ಭೇದವು ಇಲ್ಲವೇ ಇಲ್ಲ.

**ತಾತ್ಪರ್ಯಾರ್ಥ:** ನಾಮರೂಪಗಳೆಂಬ ದೇಹಾದಿ ಉಪಾಧಿಗಳ ದೃಷ್ಟಿಯಿಂದಲೇ ಜೀವಾತ್ಮ ಪರಮಾತ್ಮರೆಂಬ ಭೇದವೇ ಹೊರತು, ಪರಮಾರ್ಥದೃಷ್ಟಿಯಿಂದ ಬ್ರಹ್ಮವೊಂದೇ ಪರಮಾರ್ಥಸತ್ಯ. ನಿಜವಾಗಿ ನೋಡಿದರೆ ಜೀವಾತ್ಮ ಪರಮಾತ್ಮರೆಂಬ ಭೇದವು ಇಲ್ಲವೇ ಇಲ್ಲ.

ಈಶ ಎಂದರೆ ಈಶ್ವರ, ಜೀವ ಎಂದರೆ ಸಂಸಾರಿಯಾದ ಜೀವಾತ್ಮ; ಈಶ್ವರನೆಂದರೆ ಸರ್ವಜ್ಞ ಸರ್ವಶಕ್ತನೆಂದೂ, ಜೀವಾತ್ಮನೆಂದರೆ ಅಲ್ಪಜ್ಞ ಅಲ್ಪಶಕ್ತನೆಂದೂ ನಾವುಗಳು ತಿಳಿದಿದ್ದೇವೆಯಲ್ಲವೇ? ಸರಿ, ಈ ಜೀವೇಶ್ವರಭೇದವು ಪರಮಾರ್ಥವೇ? ಎಂದರೆ, ಪರಮಾರ್ಥವಲ್ಲ; ಏಕೆಂದರೆ ಉಪಾಧಿ ದೃಷ್ಟಿಯಿಂದಲೇ ಈ ಭೇದವು ತೋರುತ್ತಿದೆ. ಈ ಉಪಾಧಿಗಳಾದರೋ, ದೇಹಾದಿಗಳು. ಈ ದೇಹಾದ್ಯುಪಾಧಿಗಳು ಅವಿದ್ಯಾಕೃತನಾಮರೂಪಗಳೇ. ಅವಿದ್ಯೆಯಿಂದ ನಾಮರೂಪೋಪಾಧಿಗಳು, ನಾಮರೂಪಗಳಿಂದಲೇ ದೇಹಾದಿಗಳು. ಈ ದೇಹಾದಿಗಳೇ ಉಪಾಧಿಗಳು. ಈ ದೃಷ್ಟಿಯಿಂದಲೇ ಜೀವೇಶ್ವರಭೇದವು ತೋರುತ್ತಿದೆ.

ಆದರೆ **ಸತ್‌ಸ್ವಭಾವತಃ**, ನಿಜಸ್ವಭಾವದಿಂದ ನೋಡಿದರೆ, ಎಂದರೆ ಉಪಾಧಿಗಳ ಸಂಬಂಧವೇ ಇಲ್ಲದೆ, ಆತ್ಮನನ್ನು ಇರುವಂತೆ ನೋಡಿದಾಗ ಬ್ರಹ್ಮವೊಂದೇ ಇರುತ್ತದೆ. **ವಸ್ತು ಕೇವಲಮ್**, ಆತ್ಮವಸ್ತುವೇ ಇರುತ್ತದೆ.

**ಇರುವಿಕೆಯ ದೃಷ್ಟಿಯಿಂದ ನೋಡಿದಾಗ ಆತ್ಮನೊಬ್ಬನೇ.**

# 25. ಈಶದರ್ಶನವೆಂದರೆ ಸ್ವಾತ್ಮದರ್ಶನವೇ

ವೇಷಹಾನತಃ ಸ್ವಾತ್ಮದರ್ಶನಮ್ ।
ಈಶದರ್ಶನಂ ಸ್ವಾತ್ಮರೂಪತಃ ॥ ೨೫ ॥

**ಪದಚ್ಛೇದ:** ವೇಷಹಾನತಃ ಸ್ವಾತ್ಮದರ್ಶನಮ್ ಈಶದರ್ಶನಂ ನಾಮ ಸ್ವಾತ್ಮರೂಪತಃ.

**ಅನ್ವಯ:** ವೇಷಹಾನತಃ ಸ್ವಾತ್ಮದರ್ಶನಮ್ ಈಶದರ್ಶನಂ ನಾಮ ಸ್ವಾತ್ಮರೂಪತಃ.

**ಅನ್ವಯಾರ್ಥ:** **ವೇಷಹಾನತಃ** = ಉಪಾಧಿಗಳೆಂಬ ವೇಷಗಳನ್ನು ಬಿಡುವುದರಿಂದ, **ಸ್ವಾತ್ಮದರ್ಶನಂ** = ತನ್ನ ನಿಜಸ್ವರೂಪದ ದರ್ಶನವಾಗುತ್ತದೆ, **ಈಶದರ್ಶನಂ** = ಈಶ್ವರನ ದರ್ಶನವೆಂದರೆ, **ಸ್ವಾತ್ಮರೂಪತಃ** = ತನ್ನ ನಿಜಸ್ವರೂಪದರ್ಶನವೇ.

**ತಾತ್ಪರ್ಯಾರ್ಥ:** ಉಪಾಧಿಗಳನ್ನು ಬಿಟ್ಟು ನೋಡಿದರೆ ತನ್ನ ನಿಜಸ್ವರೂಪದ ಅರಿವು ಉಂಟಾಗುತ್ತದೆ. ಈಶದರ್ಶನವೆಂದರೆ ಸ್ವಾತ್ಮಸ್ವರೂಪದರ್ಶನವೇ.

**ವೇಷ** ಎಂದರೆ ಹೊರಗಿನ ಉಡುಪು, ಬಾಹ್ಯ ಉಪಾಧಿಗಳು. ಈ ಉಪಾಧಿಗಳಾವುವೂ ಆತ್ಮಸ್ವರೂಪಕ್ಕೆ ಅಂಟಿಕೊಂಡಿರುವುದಿಲ್ಲ, ವಿಚಾರ ಮಾಡದೇ ಹೋದರೆ ಈ ಉಪಾಧಿಗಳೇ ಸತ್ಯವಾಗಿರುವಂತೆಯೂ, ಆತ್ಮನಿಗೆ ನಿಜವಾಗಿಯೂ ಅಂಟಿಕೊಂಡಿರುವಂತೆಯೂ ಕಾಣುತ್ತವೆ. ಒಂದೇ ಒಂದು ಕ್ಷಣ, ಒಂದೇ ಒಂದು ಸಲ ಧೈರ್ಯವಾಗಿ ವಿವೇಕದಿಂದ ನೋಡಿಬಿಟ್ಟರೆ ಈ ಉಪಾಧಿಗಳು ಅನೃತವೆಂದೂ, ಆತ್ಮನಿಗೆ ಸ್ವಲ್ಪವೂ ಸಂಬಂಧಪಟ್ಟಿಲ್ಲವೆಂದೂ ಸುಲಭವಾಗಿ ಅರ್ಥವಾಗಿಬಿಡುತ್ತದೆ. ಹೀಗೆ ವಿವೇಕದ ಬಲದಿಂದ ಈ ಉಪಾಧಿಗಳಾವುವೂ ತನಗೆ ಸಂಬಂಧಪಟ್ಟಿಲ್ಲ ಎಂಬುದು ಅನುಭವಕ್ಕೆ ಬಂದುಬಿಡುತ್ತದೆ. ಉಪಾಧಿಗಳ ಸಂಬಂಧವು ಆತ್ಮನಿಗೆ ಇರುವಂತೆ ತೋರಿದರೂ, ಆಗಲೂ ಆತ್ಮನು ತನ್ನ ಸ್ವರೂಪದಿಂದಲೇ ಇರುತ್ತಾನೆ. ಉಪಾಧಿಗಳ ಸಂಬಂಧವು ತೋರುವಾಗಲೂ, ಇಲ್ಲದಾಗಲೂ ಆತ್ಮನು ಮಾತ್ರ ತನ್ನ ನೈಜಸ್ವರೂಪದಿಂದಲೇ ಪ್ರಕಾಶಿಸುತ್ತಿರುತ್ತಾನೆ.

ಆತ್ಮದರ್ಶನವೇ ಈಶದರ್ಶನವು. ಆತ್ಮನೆಂದರೆ ತಾನು, ಈಶನೆಂದರೆ ಈಶ್ವರನು. ಈ ಈಶ್ವರನು ಪಾರ್ವತೀಪತಿಯಾದ ಮುಕ್ಕಣ್ಣನಲ್ಲ. ವೇದಾಂತದಲ್ಲಿ ಈಶನೆಂದರೆ ಅವಸ್ಥಾತ್ರಯಗಳಿಗೂ, ಸೃಷ್ಟಿಸ್ಥಿತಿಸಂಹಾರಗಳಿಗೂ ಒಡೆಯನಾಗಿರುವ ಪರಬ್ರಹ್ಮವೇ. ಈಶ್ವರಸಾಕ್ಷಾತ್ಕಾರ ಎಂದರೆ ಸ್ವಾತ್ಮಸಾಕ್ಷಾತ್ಕಾರವೇ.

**ಉಪಾಧಿಗಳನ್ನು ಬಿಟ್ಟು ಶುದ್ಧಾತ್ಮನನ್ನು ಅರಿಯಬೇಕು.**

# 26. ಆತ್ಮಸಂಸ್ಥಿತಿಯೇ ಆತ್ಮದರ್ಶನ

ಆತ್ಮಸಂಸ್ಥಿತಿಃ ಸ್ವಾತ್ಮದರ್ಶನಂ।
ಆತ್ಮನಿರ್ದ್ವಯಾದಾತ್ಮನಿಷ್ಠತಾ ॥ ೨೬ ॥

**ಪದಚ್ಛೇದ:** ಆತ್ಮಸಂಸ್ಥಿತಿಃ ಸ್ವಾತ್ಮದರ್ಶನಂ ಆತ್ಮನಿರ್ದ್ವಯಾತ್ ಆತ್ಮನಿಷ್ಠತಾ.

**ಅನ್ವಯ:** ಆತ್ಮಸಂಸ್ಥಿತಿಃ ಸ್ವಾತ್ಮದರ್ಶನಂ; ಆತ್ಮನಿರ್ದ್ವಯಾತ್ ಆತ್ಮನಿಷ್ಠತಾ.

**ಅನ್ವಯಾರ್ಥ: ಆತ್ಮಸಂಸ್ಥಿತಿಃ** = ಆತ್ಮನಲ್ಲಿ ಆತ್ಮನಾಗಿ ಸಹಜವಾಗಿ ನಿಲ್ಲುವಿಕೆಯೇ, **ಸ್ವಾತ್ಮದರ್ಶನಂ** = ಸ್ವಾತ್ಮನ ದರ್ಶನವು. **ಆತ್ಮನಿರ್ದ್ವಯಾತ್** = ಆತ್ಮನು ದ್ವಯರಹಿತನಾದ್ದರಿಂದ, **ಆತ್ಮನಿಷ್ಠತಾ** = ಆತ್ಮನಲ್ಲಿ ಆತ್ಮನಿಷ್ಠೆಯು ಸಹಜವೇ.

**ತಾತ್ಪರ್ಯಾರ್ಥ:** ಆತ್ಮನಾಗಿ ಉಳಿದುಕೊಳ್ಳುವುದಕ್ಕೇ ಸ್ವಾತ್ಮದರ್ಶನ ಎಂದು ಹೆಸರು. ಆತ್ಮನು ಅದ್ವಿತೀಯನಾದ್ದರಿಂದ ಆತ್ಮನಿಷ್ಠೆಯೆಂಬುದು ಸಹಜವೂ ಸುಲಭವೂ ಆಗಿರುತ್ತದೆ.

ಆತ್ಮದರ್ಶನ ಎಂದರೆ ಆತ್ಮನನ್ನು ಕಾಣುವುದು ಎಂದರ್ಥವಾಗುತ್ತದೆ. ಇಲ್ಲಿ ಆತ್ಮನೇ ಬೇರೆ, ಕಾಣುವವನೇ ಬೇರೆ, ನೋಟವೇ ಬೇರೆ ಎಂದು ಅರ್ಥವನ್ನು ಮಾಡಬಾರದು. ಇಲ್ಲಿ ದ್ರಷ್ಟೃ, ದರ್ಶನ, ದೃಶ್ಯಗಳೆಂಬ ತ್ರಿಪುಟಿಯೇ ಇಲ್ಲ. **ಘಟದರ್ಶನ** ಎಂದರೆ ಘಟವನ್ನು ನೋಡುವುದು ಎಂದರ್ಥವಾಗುತ್ತದೆ. ಅದರಂತೆ ಇಲ್ಲಿ ಆತ್ಮದರ್ಶನವಲ್ಲ. ಏಕೆಂದರೆ ದ್ರಷ್ಟೃವಾದ ಆತ್ಮನೇ ದ್ರಷ್ಟವ್ಯನಾದ ಆತ್ಮನೂ ಆಗಿರುತ್ತಾನೆ. ಆತ್ಮನೆಂದರೆ ತಾನೇ ಎಂದರ್ಥವಲ್ಲವೇ? ಆದ್ದರಿಂದ ಸ್ವಾತ್ಮನಿಷ್ಠೆಯೇ ಸ್ವಾತ್ಮದರ್ಶನ, ಸ್ವಾತ್ಮದರ್ಶನವೇ ಸ್ವಾತ್ಮನಿಷ್ಠೆ. ಇಲ್ಲಿ ಸ್ವಾತ್ಮ ದರ್ಶನಕ್ಕೂ ಸ್ವಾತ್ಮನಿಷ್ಠೆಗೂ ವ್ಯತ್ಯಾಸವೇ ಇಲ್ಲ. ಎರಡೂ ಒಂದೇ ಆಗಿರುತ್ತದೆ.

ಆತ್ಮನೆಂದರೆ ಏನು? ಆತ್ಮನಲ್ಲಿ ಗುಣಧರ್ಮಲಕ್ಷಣಗಳಿವೆಯೇ? ಎಂದರೆ ಯಾವ ಗುಣಧರ್ಮಗಳೂ ಆತ್ಮನಲ್ಲಿ ಇರುವುದಿಲ್ಲ. **ಆತ್ಮನಿರ್ದ್ವಯಾತ್** = ಆತ್ಮನು ಅದ್ವಿತೀಯಸ್ವರೂಪನೇ ಆಗಿರುತ್ತಾನೆ. **ನಿರ್ಗತಂ ದ್ವಯಂ ಯಸ್ಮಾತ್ ಆತ್ಮನಃ ಸಕಾಶಾತ್ ಸ ಆತ್ಮಾ ನಿರ್ದ್ವಯಃ,** ಆತ್ಮನು ನಿರ್ದ್ವಯಸ್ವರೂಪನಾಗಿರುವುದರಿಂದ ಆತ್ಮನಿಷ್ಠೆಯೆಂಬುದು ಅತ್ಯಂತ ಸುಲಭವೇ ಆಗಿರುತ್ತದೆ. ಅವಸ್ಥಾತ್ರಯಗಳಿಗೆ ಸಾಕ್ಷಿಯಾಗಿರುವ ಆತ್ಮನೇ ತಾನೆಂದು ತಿಳಿದಾಗ ಆ ಆತ್ಮನಲ್ಲಿ ನಿಷ್ಠೆಯು ನಿತ್ಯವಾಗಿ ಸಹಜವಾಗಿ ಸುಲಭವಾಗಿ ನೆಲೆಗೊಳ್ಳುತ್ತದೆಯಲ್ಲವೇ? ಆತ್ಮದರ್ಶನ, ಆತ್ಮಸಂಸ್ಥಿತಿ, ಆತ್ಮಸಾಕ್ಷಾತ್ಕಾರ, ಆತ್ಮನಿಷ್ಠೆ, ಆತ್ಮಾನುಭವ—ಎಲ್ಲವೂ ಒಂದೇ.

**ಸ್ವಾತ್ಮದರ್ಶನದಿಂದ ಸ್ವಾತ್ಮನಿಷ್ಠನಾಗಬೇಕು.**

## 27. ಅರಿವಿಗಿಂತ ಭಿನ್ನವಾದ ವಸ್ತುವೇ ಇಲ್ಲ

ಜ್ಞಾನವರ್ಜಿತಾಽಜ್ಞಾನಹೀನಸತ್ ।
ಜ್ಞಾನಮಸ್ತಿ ಕಿಂ ಜ್ಞಾತುಮಂತರಮ್ ॥ ೨೭ ॥

**ಪದಚ್ಛೇದ:** ಜ್ಞಾನವರ್ಜಿತಾ ಅಜ್ಞಾನಹೀನಸತ್ ಜ್ಞಾನಂ ಅಸ್ತಿ ಕಿಂ ಜ್ಞಾತುಮ್ ಅಂತರಮ್.

**ಅನ್ವಯ:** ಜ್ಞಾನವರ್ಜಿತಾ ಅಜ್ಞಾನಹೀನಸತ್ ಜ್ಞಾನಂ ಜ್ಞಾತುಮ್ ಅಂತರಂ ವಸ್ತು ಅಸ್ತಿ ಕಿಮ್?

**ಅನ್ವಯಾರ್ಥ: ಜ್ಞಾನವರ್ಜಿತಾ** = ಜ್ಞಾನದ ಸಂಬಂಧವಿಲ್ಲದೆ, **ಅಜ್ಞಾನ ಹೀನಸತ್** = ಅಜ್ಞಾನದಿಂದ ರಹಿತವಾಗಿ ಇರುವಂಥದ್ದೇ, **ಜ್ಞಾನಮ್** ಜ್ಞಾನವು ಎಂದರೆ ಸಮ್ಯಗ್ಜ್ಞಾನವು. **ಜ್ಞಾತುಮ್** = ಅರಿಯುವುದಕ್ಕೆ, **ಅಂತರಮ್** = ಬೇರೆಯಾದ, **ವಸ್ತು** = ಪದಾರ್ಥವು, **ಅಸ್ತಿ ಕಿಮ್** = ಇದೆಯೇನು?

**ತಾತ್ಪರ್ಯಾರ್ಥ:** ಜ್ಞಾನವಾಗಲೀ ಅಜ್ಞಾನವಾಗಲೀ ಇಲ್ಲದ ಅರಿವೇ ನಿಜವಾದ ಜ್ಞಾನವು. ಇದಕ್ಕಿಂತ ಭಿನ್ನವಾಗಿ ಅರಿಯಬೇಕಾದ ದ್ವೈತಪದಾರ್ಥವಿಲ್ಲ.

ಆತ್ಮನಿಗೆ **ಜ್ಞಾನಂ** ಎಂದು ಹೆಸರು. ಆತ್ಮಜ್ಞಾನಕ್ಕೂ **ಜ್ಞಾನಂ** ಎಂದೇ ಹೆಸರು. ಮೋಕ್ಷಕ್ಕೆ ಸಾಧನವಾದದ್ದೂ **ಜ್ಞಾನವೇ**. ಅಜ್ಞಾನವನ್ನು ಕಳೆಯುವಂಥದ್ದೂ **ಜ್ಞಾನವೇ**. ಹೀಗಾಗಿ ವೇದಾಂತದಲ್ಲಿ **ಜ್ಞಾನವು** ಬಹಳ ಪ್ರಧಾನವಾದ ತತ್ತ್ವ. ಇಲ್ಲಿ ಜ್ಞಾನವೆಂದರೇನು? ಎಂಬುದನ್ನು ಈ ಶ್ಲೋಕದಲ್ಲಿ ಭಗವಾನ್ ರಮಣ ಮಹರ್ಷಿಗಳು ಸುಂದರವಾಗಿ ತಿಳಿಸಿದ್ದಾರೆ.

**ಜ್ಞಾನವರ್ಜಿತಂ ಜ್ಞಾನಂ** = ಜ್ಞಾನವರ್ಜಿತವಾದ ಜ್ಞಾನವು. ಜ್ಞಾನವರ್ಜಿತ ಎಂದರೆ ದ್ವೈತವಸ್ತುಗಳ ಸಂಬಂಧದ ಜ್ಞಾನದಿಂದ ವರ್ಜಿತವಾದ ಎಂದರ್ಥ, ಎಂದರೆ ತ್ರಿಪುಟಿರಹಿತವಾದ ಎಂದರ್ಥ. ಜ್ಞಾತೃ ಜ್ಞಾನ ಜ್ಞೇಯವೆಂಬ ತ್ರಿಪುಟಿ ರಹಿತವಾದ ಜ್ಞಾನವೇ ಇಲ್ಲಿ ಜ್ಞಾನ ಎಂದು ಕರೆಯಲ್ಪಡುತ್ತದೆ. ಮತ್ತು **ಅಜ್ಞಾನ ಹೀನಸತ್** = ಅಜ್ಞಾನದ ಸಂಬಂಧವೂ ಇಲ್ಲದ ಅರಿವಿನ ಸ್ವರೂಪವೇ **ಜ್ಞಾನವು.**

ಅನಾತ್ಮವಸ್ತುಗಳ ಜ್ಞಾನ, ಸಂಶಯಜ್ಞಾನ, ಮಿಥ್ಯಾಜ್ಞಾನ, ಜ್ಞಾನಾಭಾವ ಗಳಿಂದ ದೂರವಿರುವ, ಅರಿವಿನಗಟ್ಟಿಯೇ ಆಗಿರುವ ಆತ್ಮನಿಗೆ ಅರಿವು, ಜ್ಞಾನ— ಎಂದು ಹೆಸರು. ಈ ಜ್ಞಾನಕ್ಕಿಂತ ಬೇರೆಯಾಗಿ, ತಿಳಿಯಲ್ಪಡಬೇಕಾದ ಪದಾರ್ಥವೇ ಇರುವುದಿಲ್ಲ. ಇವನೇ ಆತ್ಮ, ಇವನೇ ಸತ್ ಚಿತ್ ಆನಂದ ಸ್ವರೂಪನು. ಇವನೇ ಪರಬ್ರಹ್ಮಸ್ವರೂಪನೂ ಆಗಿದ್ದಾನೆ.

**ಜ್ಞಾನ ಅಜ್ಞಾನಗಳನ್ನು ಮೀರಿರುವ ಜ್ಞಾನವೇ ಸಮ್ಯಗ್ಜ್ಞಾನವು.**

# 28. ಆತ್ಮದರ್ಶನದಿಂದ ಸಹಜಾನಂದ ಸ್ಥಿತಿ

ಕಿಂ ಸ್ವರೂಪಮಿತ್ಯಾತ್ಮದರ್ಶನೇ।
ಅವ್ಯಯಾಽಭವಾಽಽಪೂರ್ಣಚಿತ್‌ಸುಖಮ್ ॥ ೨೮ ॥

**ಪದಚ್ಛೇದ:** ಕಿಂ ಸ್ವರೂಪಮ್ ಇತಿ ಆತ್ಮದರ್ಶನೇ ಅವ್ಯಯ ಅಭವ ಆಪೂರ್ಣ ಚಿತ್ ಸುಖಮ್.

**ಅನ್ವಯ:** ಮಮ ಸ್ವರೂಪಂ ಕಿಮ್ ಇತಿ ಆತ್ಮದರ್ಶನೇ ಸತಿ ಅವ್ಯಯ ಅಭವ ಆಪೂರ್ಣ ಚಿತ್ ಸುಖಮ್ ಅವಶಿಷ್ಯತೇ.

**ಅನ್ವಯಾರ್ಥ: ಮಮ** = ನನ್ನ, **ಸ್ವರೂಪಂ** = ಸ್ವರೂಪವು, **ಕಿಮ್** = ಏನು? **ಇತಿ** = ಎಂಬುದನ್ನು ವಿಚಾರಮಾಡಿದರೆ, **ಆತ್ಮದರ್ಶನೇ ಸತಿ** = ಆತ್ಮದರ್ಶನವು ಆಗಲಾಗಿ, **ಅವ್ಯಯ ಅಭವ ಆಪೂರ್ಣ ಚಿತ್ ಸುಖಮ್ ಅವಶಿಷ್ಯತೇ** = ಬದಲಾವಣೆಗಳಿಲ್ಲದ ಜನ್ಮವಿಲ್ಲದ ಪರಿಪೂರ್ಣವಾದ ಕೇವಲ ಅರಿವಿನ ಸ್ವರೂಪವಾದ ಸುಖವೇ ಉಳಿದುಕೊಳ್ಳುತ್ತದೆ.

**ತಾತ್ಪರ್ಯಾರ್ಥ:** ನನ್ನ ನಿಜಸ್ವರೂಪವೇನು? ಎಂದು ವಿಚಾರಮಾಡಲಾಗಿ ಅದರಿಂದ ಆತ್ಮದರ್ಶನವು ಉಂಟಾಗುತ್ತದೆ. ಆತ್ಮದರ್ಶನವಾದ ಕೂಡಲೇ ನಾಶ ವಿಲ್ಲದ ಜನ್ಮರಹಿತವಾದ ಪರಿಪೂರ್ಣಸಚ್ಚಿದಾನಂದಸ್ವರೂಪವೇ ಪ್ರಕಾಶಿಸುತ್ತದೆ.

ನಿಜವಾದ ಮುಮುಕ್ಷುಸಾಧಕರು ಮಾಡಬೇಕಾದದ್ದು ನಾನು ಯಾರು? ಎಂಬ ವಿಚಾರ. ಜಪ, ಪೂಜಾ, ಪಾರಾಯಣಗಳಿಂದ ಚಿತ್ತಶುದ್ಧಿಯನ್ನು ಹೊಂದಿದ ಬಳಿಕ, ಮುಮುಕ್ಷುಸಾಧಕರು **ಕಿಂ ಮಮ ನಿಜಸ್ವರೂಪಂ?** ಎಂದು ವಿಚಾರಮಾಡುತ್ತಾ ಇದ್ದರೆ, ಅದರಿಂದ ಅವರಿಗೆ ತಮ್ಮ ನಿಜ ಆತ್ಮನ ದರ್ಶನವು ಆಗುತ್ತದೆ. ಇಲ್ಲಿ ಆತ್ಮದರ್ಶನ ಎಂದರೆ ತನ್ನ ಪರಮಾರ್ಥ ಆತ್ಮನ ಅರಿವು ಉಂಟಾಗುತ್ತದೆ. ಈ ಜಡವಾದ ಅನಾತ್ಮಗಳಾದ ದೇಹಾದಿಗಳು ತಾನಲ್ಲವೆಂದೂ ಸತ್ ಚಿತ್ ಆನಂದಸ್ವರೂಪನೇ ತಾನೆಂದೂ ನಿಶ್ಚಯಜ್ಞಾನವುಂಟಾಗಿಬಿಡುತ್ತದೆ. ಇದು ಕೇವಲ ನಂಬಿಕೆಯ ಅರಿವಲ್ಲ; ಮತ್ತೇನೆಂದರೆ: ನಿಶ್ಚಿತ ಅನುಭವದ ಅರಿವು ಇದು. ಇದೇ ಆತ್ಮದರ್ಶನವು.

ಈ ಆತ್ಮದರ್ಶನವಾಗಿಬಿಟ್ಟರೆ ಆ ಕೂಡಲೇ ಸಹಜವಾದ ಆನಂದ ಸ್ವರೂಪವು ತೋರಿಕೊಳ್ಳುತ್ತದೆ. ಈ ಆನಂದವು **ಅವ್ಯಯ**ವಾದದ್ದು ಎಂದರೆ ನಾಶವಿಲ್ಲದ್ದು, **ಅಭವ** ಎಂದರೆ ಜನ್ಮವಿಲ್ಲದ್ದು ಎಂದರೆ ಸ್ವಾಭಾವಿಕವಾದದ್ದು, **ಆಪೂರ್ಣ**ವಾದದ್ದು ಎಂದರೆ ಪರಿಪೂರ್ಣವಾದ ಆನಂದಸ್ವರೂಪವಿದು.

**ಆತ್ಮದರ್ಶನದಿಂದ ಸಹಜಾನಂದಪ್ರಾಪ್ತಿ.**

# 29. ಬ್ರಹ್ಮಜ್ಞಾನಿಗೆ ಪರಮಾನಂದಪ್ರಾಪ್ತಿ

ಬಂಧಮುಕ್ತ್ಯತೀತಂ ಪರಂ ಸುಖಮ್।
ವಿಂದತೀಹ ಜೀವಸ್ತು ದೈವಿಕಃ ॥ ೨೯ ॥

**ಪದಚ್ಛೇದ:** ಬಂಧ ಮುಕ್ತಿ ಅತೀತಂ ಪರಂ ಸುಖಂ ವಿಂದತಿ ಇಹ ಜೀವಃ ತು ದೈವಿಕಃ.

**ಅನ್ವಯ:** ದೈವಿಕಃ ಜೀವಃ ತು ಬಂಧ ಮುಕ್ತಿ ಅತೀತಂ ಪರಂ ಸುಖಮ್ ಇಹ ವಿಂದತಿ.

**ಅನ್ವಯಾರ್ಥ: ದೈವಿಕಃ** = ದೇವನ ಸ್ವರೂಪವನ್ನು ಅರಿತಿರುವಂಥ, **ಜೀವಃ ತು** = ಜೀವನ್ಮುಕ್ತನಾದ ಬ್ರಹ್ಮಜ್ಞಾನಿಯಾದರೋ, **ಬಂಧ ಮುಕ್ತಿ ಅತೀತಂ** = ಬಂಧ ಮುಕ್ತಿಗಳೆಂಬ ಭೇದಗಳನ್ನು ಮೀರಿನಿಂತಿರುವ, **ಪರಂ ಸುಖಂ** = ಮೋಕ್ಷವೆಂಬ ಪರಮಸುಖವನ್ನು, **ಇಹ** = ಈ ಜನ್ಮದಲ್ಲಿಯೇ, **ವಿಂದತಿ** = ಹೊಂದುತ್ತಾನೆ.

**ತಾತ್ಪರ್ಯಾರ್ಥ:** ತಾನೇ ಬ್ರಹ್ಮವೆಂಬ ತತ್ತ್ವವನ್ನು ಅರಿತಿರುವ ಮಹಾತ್ಮನು ಈ ಜನ್ಮದಲ್ಲಿಯೇ ಸಹಜವಾದ ಬ್ರಹ್ಮಾನಂದಮೋಕ್ಷವನ್ನು ಹೊಂದಿಬಿಡುತ್ತಾನೆ.

**ದೈವಿಕಜೀವ**ನೆಂದರೆ ತಾನೇ ಬ್ರಹ್ಮ, ತಾನೇ ದೇವನೆಂದು ಅನುಭವದಿಂದ ತಿಳಿದಿರುವ ಬ್ರಹ್ಮಜ್ಞಾನಿಯು. ಆದರೆ ಇವನೂ ಇತರ ಜೀವರುಗಳಂತೆಯೇ ಕಾಣುತ್ತಾನೆ. ಬ್ರಹ್ಮಜ್ಞಾನಿಯಾಗಿದ್ದರೂ ಸಮಾಜದಲ್ಲಿರುವ ಜನಗಳಿಗೆ ಇವನೂ ಇತರ ಜೀವರುಗಳಂತೆಯೇ ಕಾಣಿಸುತ್ತಾನೆ. ಆದ್ದರಿಂದ ಇವನಿಗೆ **ದೈವಿಕಜೀವ**ನೆಂದು ಹೆಸರು. ನಿಜವಾಗಿ ನೋಡಿದರೆ ಇವನು ಬ್ರಹ್ಮಸ್ವರೂಪನೇ ಹೊರತು ಜೀವನಲ್ಲವೇ ಅಲ್ಲ. ಇವನಿಗೇ ಆತ್ಮಜ್ಞಾನಿ, ತತ್ತ್ವಜ್ಞಾನಿ ಎಂದು ಹೆಸರು.

ಇಂಥ ಬ್ರಹ್ಮಜ್ಞಾನಿಗೆ ಆಗುವ ಫಲವೇನು? ಎಂದರೆ ಬ್ರಹ್ಮಾನಂದಪ್ರಾಪ್ತಿಯೇ ಫಲ. ಬ್ರಹ್ಮಾನಂದವೆಂದರೆ, ಬಂಧಮೋಕ್ಷಗಳ ಕಲ್ಪನೆಗಳೇ ಇಲ್ಲದ, ಆನಂದೀ ಆನಂದ್ಯ ಆನಂದವೆಂಬ ತ್ರಿಪುಟಿಯ ಸಂಬಂಧವೇ ಇಲ್ಲದ, ಸ್ವಾಭಾವಿಕವಾದ ಸಹಜಾನಂದ. ಈ ಬ್ರಹ್ಮಾನಂದಕ್ಕೇ ಪರಮಸುಖ ಎಂದೂ ಹೆಸರು. ಬ್ರಹ್ಮಜ್ಞಾನಿಗೆ ಈ ಬ್ರಹ್ಮಾನಂದಸುಖವು ಈಗಲೇ ಇಲ್ಲಿಯೇ ದೊರಕುತ್ತದೆ. **ತಮೇವಂ ವಿದ್ವಾನ್ ಅಮೃತ ಇಹ ಭವತಿ**—ಎಂದು ಶ್ರುತಿಯೂ ಇದನ್ನೇ ಹೇಳುತ್ತಿದೆ. ಜೀವನ್ಮುಕ್ತನಿಗೆ ಜೀವನ್ಮುಕ್ತಿಯೇ ಪ್ರಯೋಜನವು.

**ಬ್ರಹ್ಮಜ್ಞಾನದಿಂದ ಇಲ್ಲಿಯೇ ಬ್ರಹ್ಮಾನಂದವು ದೊರಕುತ್ತದೆ.**

## 30. ಶ್ರೀರಮಣರ ಉಪದೇಶಸಾರವಿದು

ಅಹಮಪೇತಕಂ ನಿಜವಿಭಾನಕಮ್ ।
ಮಹದಿದಂ ತಪೋ ರಮಣವಾಗಿಯಮ್ ॥ ೩೦ ॥

**ಪದಚ್ಛೇದ:** ಅಹಮಪೇತಕಂ ನಿಜವಿಭಾನಕಮ್ ಮಹತ್ ಇದಂ ತಪಃ ರಮಣವಾಕ್ ಇಯಮ್.

**ಅನ್ವಯ:** ಅಹಮಪೇತಕಂ ನಿಜವಿಭಾನಕಂ ಇದಂ ಮಹತ್ ತಪಃ ಇಯಂ ರಮಣವಾಕ್.

**ಅನ್ವಯಾರ್ಥ: ಅಹಮಪೇತಕಂ** = 'ಅಹಂ' ಪ್ರತ್ಯಯದ ಸಂಬಂಧವಿಲ್ಲದ, **ನಿಜವಿಭಾನಕಂ** = ತಾನೆಂಬುದೇ ಆತ್ಮನ ಅರಿವು, ಆತ್ಮನ ಪ್ರಕಾಶವು. **ಇದಂ** = ಇದೇ, **ಮಹತ್** = ಮಹತ್ತಾದ, **ತಪಃ** = ತಪಸ್ಸು. **ಇಯಂ** = ಇದೇ, **ರಮಣವಾಕ್** = ಶ್ರೀರಮಣಮಹರ್ಷಿಗಳ ಉಪದೇಶದ ಸಾರ.

**ತಾತ್ಪರ್ಯಾರ್ಥ:** ಅಹಂಪ್ರತ್ಯಯವನ್ನು ಮೀರಿರುವ ಆತ್ಮನೇ ತಾನೆಂದು ಸ್ವಾನುಭವದಿಂದ ನಿಶ್ಚಿತವಾಗಿ ತಿಳಿಯುವುದೇ ನಿಜವಾದ ದೊಡ್ಡ ತಪಸ್ಸು. ಹೀಗೆಂಬುದೇ ಶ್ರೀರಮಣರ ಉಪದೇಶವು.

ತಪಸ್ಸಿನಲ್ಲಿ ಅನೇಕ ಪ್ರಕಾರಗಳಿವೆ.ಆದರೆ ಆತ್ಮಜ್ಞಾನಕ್ಕಿಂತ ಮಿಗಿಲಾದ ತಪಸ್ಸಿಲ್ಲ. ಆತ್ಮನನ್ನು ಅಹಂಪ್ರತ್ಯಯಗಳಿಂದ ಬಿಡಿಸಿ ತಿಳಿದುಕೊಳ್ಳುವುದೇ ತಪಸ್ಸು, ಆತ್ಮನಿಷ್ಠನಾಗುವುದೇ ಮಹಾತಪಸ್ಸು. ಈ ತಪಸ್ಸಿನಿಂದ ಪುಣ್ಯಪಾಪಕರ್ಮಗಳೆಲ್ಲವೂ ಭಸ್ಮವಾಗಿ ಹೋಗುತ್ತವೆ. **"ಯಸ್ಯ ಜ್ಞಾನಮಯಂ ತಪಃ"** ಎಂದು ಮುಂಡಕೋಪನಿಷತ್ತೂ ಕೂಡ ಇದನ್ನೇ ಸಾರುತ್ತಿದೆ.

ಅಹಂಕಾರದ ಮೂಲವನ್ನು ಹುಡುಕಿ, ಅಹಂಕಾರಕ್ಕೂ ಸಾಕ್ಷಿಯಾಗಿರುವ, ಅಹಂಪ್ರತ್ಯಯದ ಹಿಂದಿರುವ ಸರ್ವಬೌದ್ಧಪ್ರತ್ಯಯಗಳನ್ನೂ ಬೆಳಗುತ್ತಿರುವ ಆತ್ಮನೇ ತಾನೆಂದು ತಿಳಿದು ಆ ಸಹಜಸ್ವರೂಪದಲ್ಲಿಯೇ ಸ್ವಾಭಾವಿಕವಾಗಿ ನೆಲೆಗೊಳ್ಳುವುದೇ ನಿಜವಾದ ತಪಸ್ಸು. ಸಕಲಮಾನವರಿಗೂ ದಕ್ಕುವ ಸಹಜವಾದ ತಪಸ್ಸಿದು. ಇದೇ ಭಗವಾನ್ ಶ್ರೀರಮಣಮಹರ್ಷಿಗಳ ಉಪದೇಶಸಾರ. ಶ್ರೀರಮಣರು ಮಾಡಿದ ತಪಸ್ಸೆಲ್ಲ ಇಷ್ಟೇ. ಸಕಲ ಉಪನಿಷತ್ತುಗಳ ಉಪದೇಶಗಳ ಸಾರವೆಲ್ಲಾ ಇಷ್ಟೇ. ಈ ತಪಸ್ಸಿನ ಫಲವೆಂದರೆ ಜೀವನ್ಮುಕ್ತಿಯೇ. ಜೀವನ್ಮುಕ್ತಿ ಎಂದರೆ ಬ್ರಾಹ್ಮೀಸ್ಥಿತಿ, ಸಹಜಾನಂದಸ್ಥಿತಿ. **ಇದೇ ಸ್ವಾಭಾವಿಕ ಬ್ರಹ್ಮಾನಂದಸ್ಥಿತಿ.**

**ಅಹಂಪ್ರತ್ಯಯವನ್ನೂ ದಾಟಿ ಆತ್ಮನಿಷ್ಠನಾಗಬೇಕು.**

# 31. ಭಗವಾನ್ ಶ್ರೀರಮಣ ಮಹರ್ಷಿಗಳು

ಪವಿತ್ರಾತ್ಮಳಾದ ಭಾರತಾಂಬೆಯು ಇಪ್ಪತ್ತನೆಯ ಶತಮಾನದಲ್ಲಿ ತನ್ನ ಗರ್ಭಾಂಬುಧಿ ಯಿಂದ ಜನ್ಮಕೊಟ್ಟ **ಮಹಾಪುರುಷ ಪುತ್ರರತ್ನ, ಶ್ರೀರಮಣರು.**

20ನೆಯ ಶತಮಾನದ **ದಕ್ಷಿಣಾಮೂರ್ತಿ**ಗಳೆಂದೇ ವಿಶ್ವವಂದ್ಯರಾಗಿ ಸಕಲ ಋಷಿ ಮುನಿ ಯತಿ ಪಂಡಿತರುಗಳಿಂದ ಗುರುತಿಸಲ್ಪಟ್ಟ **ಮಹಾತ್ಮರು ಶ್ರೀರಮಣರು.**

ತಮ್ಮ ಹದಿನಾರನೆಯ, ಎಳೆಯ ವಯಸ್ಸಿನಲ್ಲಿಯೇ, "ನಾನು ಬ್ರಹ್ಮಸ್ವರೂಪನೇ" ಎಂದು ತಿಳಿದು, ಮರಣಭಯವನ್ನು ಗೆದ್ದ **ಅಮೃತಾತ್ಮರೇ ಶ್ರೀರಮಣರು.**

ತಮ್ಮ 16ನೆಯ ವಯಸ್ಸಿನಿಂದ 70ನೆಯ ವಯಸ್ಸಿನವರೆಗೂ, 56 ವರ್ಷಗಳಕಾಲ ಒಂದೇ ಸ್ಥಳದಲ್ಲಿದ್ದು ಜ್ಞಾನೋಪದೇಶಮಾಡಿದ **ಕೂಟಸ್ಥಸದ್ಗುರು, ಶ್ರೀರಮಣರು.**

ಸಾಗರವು ನದಿಗಳನ್ನು ಆಕರ್ಷಿಸುವಂತೆ ತಾವಿದ್ದಲ್ಲಿಯೇ ಜಿಜ್ಞಾಸು ಮುಮುಕ್ಷು ಸಾಧಕರುಗಳನ್ನು ಆಕರ್ಷಿಸುತ್ತಿದ್ದ ಅಯಸ್ಕಾಂತ **ಜ್ಞಾನಿಪುಂಗವರು, ಶ್ರೀರಮಣರು.**

ತಮ್ಮ ಅಗಾಧ ಮೌನವ್ಯಾಖ್ಯಾನದಿಂದಲೇ ಜಿಜ್ಞಾಸುಗಳ ಅಜ್ಞಾನಾಂಧಕಾರವನ್ನು ದೂರಮಾಡುತ್ತಿದ್ದ 20ನೆಯ ಶತಮಾನದ **ದಕ್ಷಿಣಾಮೂರ್ತಿಗಳು ಶ್ರೀರಮಣರು.**

ಪುತ್ರೈಷಣಾ ವಿತ್ತೈಷಣಾ ಲೋಕೈಷಣಾ ಎಂಬ ಏಷಣಾತ್ರಯಗಳಿಂದ ಮೇಲಕ್ಕೆದ್ದು ಸರ್ವಸಂಗಪರಿತ್ಯಾಗಿಗಳಾಗಿದ್ದ **ಸಂನ್ಯಾಸಿಪುಂಗವರು ಶ್ರೀರಮಣರು.**

**'ಯಸ್ಯ ಜ್ಞಾನಮಯಂ ತಪಃ'** ಎಂಬ ಶ್ರುತಿವಾಕ್ಯದಂತೆ ಸದಾ ಸರ್ವದಾ ಜ್ಞಾನ ತಪೋನಿಷ್ಠರಾಗಿ, ತಪೋಮೂರ್ತಿಗಳಾಗಿದ್ದ **ತಪಃಪುಂಗವರು ಶ್ರೀರಮಣರು.**

ಹುಲಿ, ಸಿಂಹ, ಸರ್ಪ, ಧೇನು, ನಾಯಿ, ಅಳಿಲು, ಕೋತಿ, ಭಿಕ್ಷುಕರು, ಕಳ್ಳರು— ಎಲ್ಲರಲ್ಲಿಯೂ ತಮ್ಮನ್ನೇ ಕಾಣುತ್ತಿದ್ದ **ಸರ್ವಾತ್ಮಭಾವಸಂಪನ್ನರು ಶ್ರೀರಮಣರು.**

ದೇಹಾಧ್ಯಾಸರಹಿತರಾಗಿ, ಸದಾನಂದಸ್ವರೂಪರಾಗಿ, ಮಾನಾಪಮಾನಗಳಿಂದ ದೂರರಾಗಿ ಸಹಜಬ್ರಹ್ಮನಿಷ್ಠರಾಗಿದ್ದ **ಬ್ರಹ್ಮನಿಷ್ಠಪುಂಗವರು ಶ್ರೀರಮಣರು.**

ಮಂದಾಧಿಕಾರಿಗಳಿಗೂ ಮಧ್ಯಮಾಧಿಕಾರಿಗಳಿಗೂ ಉತ್ತಮಾಧಿಕಾರಿಗಳಿಗೂ ಸಂನ್ಯಾಸಿಗಳಿಗೂ ಉಪದೇಶಗಳನ್ನು ನೀಡುತ್ತಿದ್ದ **ಜಗದ್ಗುರುಗಳು ಶ್ರೀರಮಣರು.**

ಮುಮುಕ್ಷುಗಳಿಗೆ ಅಯಸ್ಕಾಂತರಾಗಿ, ತಪಸ್ವಿಸಂನ್ಯಾಸಿಗಳಿಗೆ ಮೋಕ್ಷಸ್ವರೂಪರಾಗಿ, ಜಿಜ್ಞಾಸುಗಳಿಗೆ ಜ್ಞಾನಬೋಧಕರಾಗಿ, ಸಕಲಮಾನವರಿಗೂ ಶಾಂತಿಧಾಮರಾಗಿ ಪರಬ್ರಹ್ಮಸ್ವರೂಪರಾಗಿದ್ದ **ಜೀವನ್ಮುಕ್ತರು ಶ್ರೀರಮಣರು.**

**॥ ಓಂ ನಮೋ ಭಗವತೇ ಶ್ರೀರಮಣಾಯ ॥**

# 32. ಶ್ರೀರಮಣರ ಏಕಶ್ಲೋಕೀ ವೇದಾಂತ

ಬ್ರಹ್ಮಜ್ಞಾನಿವರೇಣ್ಯರೂ ಬ್ರಹ್ಮನಿಷ್ಠರೂ ಜೀವನ್ಮುಕ್ತರೂ ದಕ್ಷಿಣಾಮೂರ್ತಿ ಸ್ವರೂಪರೂ ಆದ **ಭಗವಾನ್ ಶ್ರೀರಮಣಮಹರ್ಷಿಗಳು** ಈ ಕೆಳಗಿನ ಒಂದೇ ಶ್ಲೋಕದಲ್ಲಿ ವೇದಾಂತದ ಸಂದೇಶವನ್ನು ಸುಂದರವಾಗಿ ತಿಳಿಸಿದ್ದಾರೆ:

**ಹೃದಯಕುಹರಮಧ್ಯೇ ಕೇವಲಂ ಬ್ರಹ್ಮಮಾತ್ರಮ್**
**ಹ್ಯಹಮಹಮಿತಿ ಸಾಕ್ಷಾತ್ ಆತ್ಮರೂಪೇಣ ಭಾತಿ।**
**ಹೃದಿ ವಿಶ ಮನಸಾ ತ್ವಂ ಚಿನ್ವತಾ ಮಜ್ಜತಾ ವಾ**
**ಪವನಚಲನರೋಧಾತ್ ಆತ್ಮನಿಷ್ಠೋ ಭವ ತ್ವಮ್॥**

ಶ್ರೀರಮಣಗೀತಾ

**ತಾತ್ಪರ್ಯಾರ್ಥ:** ಪ್ರತಿಯೊಬ್ಬನ ಹೃದಯ ಗುಹೆಯೊಳಗೆ ಸಚ್ಚಿದಾನಂದ ರೂಪವಾದ ಪರಿಶುದ್ಧವಾದ ಕೇವಲ ಬ್ರಹ್ಮವೇ ಪ್ರಕಾಶಿಸುತ್ತಿರುತ್ತದೆ. ಅದೇ ಎಲ್ಲರಲ್ಲಿಯೂ 'ನಾನು', 'ನಾನು' ಎಂದು ಆತ್ಮರೂಪದಿಂದ ಬೆಳಗುತ್ತಿದೆ. ಆದ್ದರಿಂದ ಎಲೈ ಮುಮುಕ್ಷುಸಾಧಕನೇ, ನೀನು ಆ ಬ್ರಹ್ಮವನ್ನು ಪರಿಶುದ್ಧವಾದ ನಿನ್ನ ಮನಸ್ಸಿನಿಂದ ಒಳಹೊಕ್ಕು ಹುಡುಕು. ವಿಚಾರದ ಬಲದಿಂದ ಆ ಬ್ರಹ್ಮವನ್ನೇ ನಾನೆಂದು ತಿಳಿದುಕೋ. ಅಥವಾ ಪ್ರಾಣಾಯಾಮದಿಂದ ಎಂದರೆ ಪ್ರಾಣನ ವ್ಯಾಪಾರದ ನಿರೋಧದಿಂದ ಆತ್ಮನಲ್ಲಿಯೇ ಮುಳುಗಿಬಿಡು. ಹೀಗೆ ಮಾಡಿದಾಗ ನೀನೇ ಆತ್ಮನಿಷ್ಠನೂ ಬ್ರಹ್ಮನಿಷ್ಠನೂ ಆಗಿ ಕೃತಾರ್ಥನಾಗಿಬಿಡುತ್ತೀಯೆ.

ಈ ಮೇಲಿನ ಶ್ಲೋಕಕ್ಕೆ ವಿದ್ವಾಂಸರುಗಳು ತಮ್ಮ ತಮ್ಮ ಶಾಸ್ತ್ರಪಾಂಡಿತ್ಯದ ಬಲದಿಂದ ಎಷ್ಟು ಬೇಕಾದರೂ ಅರ್ಥಗಳನ್ನು ಮಾಡಬಹುದು. ಸೂತ್ರದಂತಿರುವ ಈ ಒಂದೇ ಶ್ಲೋಕಕ್ಕೆ ವಿಸ್ತಾರವಾದ ವ್ಯಾಖ್ಯಾನಗಳನ್ನೇ ಬರೆಯಬಹುದು. ಇರಲಿ, ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೇನೆಂದರೆ: ಬ್ರಹ್ಮವೇ ಆತ್ಮ, ಆತ್ಮನೇ ಬ್ರಹ್ಮ. ಸಕಲಪ್ರಾಣಿಗಳೊಳಗೆ 'ನಾನು', 'ನಾನು' ಎಂಬ ರೂಪದಿಂದ ಹೊಳೆಯುತ್ತಿರುವ ಆತ್ಮನೇ ಪ್ರತ್ಯಗಾತ್ಮ. ಇವನೇ ಅಸಂಸಾರಿಯಾದ ಶುದ್ಧನಾದ ಆತ್ಮ. ಇವನೇ ವೇದಾಂತಪ್ರತಿಪಾದ್ಯನಾಗಿರುವ ಸಚ್ಚಿದಾನಂದಾತ್ಮ. ಇವನೇ ನಮ್ಮೆಲ್ಲರ ಪರಮಾರ್ಥಸ್ವರೂಪ. ಇವನನ್ನೇ ತಾನೆಂದು ತಿಳಿದವನೇ ಬ್ರಹ್ಮನಿಷ್ಠ ಅಥವಾ ಆತ್ಮನಿಷ್ಠ. ಶುದ್ಧವಾದ ಮನಸ್ಸಿನಿಂದ ವಿಚಾರಮಾಡಿದರೆ ಸಾಧಕನು ಆತ್ಮನಿಷ್ಠನಾಗುತ್ತಾನೆ. ಏಕಾಗ್ರಮನಸ್ಸಿನಿಂದ ಒಳಹೊಕ್ಕರೂ ಅಂಥವನೂ ಆತ್ಮನಿಷ್ಠನಾಗಿ ಜೀವನ್ಮುಕ್ತನೇ ಆಗಿಬಿಡುತ್ತಾನೆ. ಆತ್ಮನಿಷ್ಠನೇ ಬ್ರಹ್ಮನಿಷ್ಠನು ಹಾಗೂ ಜೀವನ್ಮುಕ್ತನು. ಇವನು ಕೃತಕೃತ್ಯ! ಇವನಿಗೆ ದೇಹಾಂತರವಾಗಲೀ ಜನ್ಮಾಂತರವಾಗಲೀ ಇಲ್ಲ!

# 33. ಶ್ರೀರಮಣರ 'ಪ್ರಸ್ಥಾನತ್ರಯೀ'

ವೇದಾಂತದರ್ಶನದ ಸಾಧನಸಿದ್ಧಾಂತಗಳನ್ನು ಸಂಪೂರ್ಣವಾಗಿ ತಿಳಿಯಬೇಕಾದರೆ **ವೇದಾಂತಗಳ** ಜೊತೆಯಲ್ಲಿ **ಭಗವದ್ಗೀತಾ** ಮತ್ತು **ವೇದಾಂತ ಮೀಮಾಂಸಾಸೂತ್ರ**ಗಳನ್ನೂ ಅಧ್ಯಯನಮಾಡಬೇಕು. ಹೀಗಾಗಿ **ಭಗವದ್ಗೀತಾ, ಉಪನಿಷತ್ತುಗಳು, ಬ್ರಹ್ಮಸೂತ್ರಗಳು**—ಈ ಮೂರನ್ನೂ ಸೇರಿಸಿ **'ವೇದಾಂತ ಪ್ರಸ್ಥಾನತ್ರಯೀ'** ಎಂದು ಕರೆಯುವ ಸಂಪ್ರದಾಯವಿದೆ. ಹೀಗೆಯೇ ಭಗವಾನ್ ಶ್ರೀರಮಣ ಮಹರ್ಷಿಗಳ **ಸದ್ದರ್ಶನಮ್, ಉಪದೇಶಸಾರಃ, ಶ್ರೀರಮಣಗೀತಾ** ಈ ಮೂರಕ್ಕೂ ಒಟ್ಟಾಗಿ **ರಮಣಪ್ರಸ್ಥಾನತ್ರಯೀ** ಎಂದು ಹೆಸರಿದೆ. ಈ ಮೂರರ ಅಧ್ಯಯನದಿಂದ ನಮಗೆ ಶ್ರೀರಮಣರ ಉಪದೇಶಗಳು ಅರ್ಥವಾಗುತ್ತವೆ.

೧. **सद्दर्शनम्** : ಭಗವಾನ್ ರಮಣಮಹರ್ಷಿಗಳು ತಮಿಳಿನಲ್ಲಿ ಬರೆದಿರುವ **'ಉಳ್ಳದು ನಾರ್ಪದು'** ಎಂಬ ಗ್ರಂಥದಲ್ಲಿ ನಲವತ್ತು ಶ್ಲೋಕಗಳಿವೆ. ಅದರ ಸಂಸ್ಕೃತ ಅನುವಾದವೇ **सद्दर्शनम्** ಎಂಬ ಗ್ರಂಥ. ಶ್ರೀರಮಣರ ಭಕ್ತರೂ ಶಿಷ್ಯರೂ ಆದ ಕಾವ್ಯಕಂಠವಾಸಿಷ್ಠಗಣಪತಿಮುನಿಗಳು ಇದನ್ನು ಸಂಸ್ಕೃತಕ್ಕೆ ಅನುವಾದಮಾಡಿರುತ್ತಾರೆ. ಈ ಗ್ರಂಥದಲ್ಲಿ ಆತ್ಮದರ್ಶನದ ಸ್ವರೂಪವನ್ನೂ ಸಾಧನಗಳನ್ನೂ ಶ್ರೀರಮಣರು ಉಪದೇಶಿಸಿದ್ದಾರೆ. ಆತ್ಮವಿದನಾದ ಆತ್ಮನಿಷ್ಠನಿಗೆ ಜನ್ಮಮರಣಭಯವಿಲ್ಲ ಎಂಬುದನ್ನು ಇಲ್ಲಿ ತಿಳಿಸಿದೆ.

೨. **उपदेशसारः** : ತಮಿಳಿನಲ್ಲಿ ರಚಿಸಿದ್ದ **'ಉಪದೇಶ ಉಂದಿಯಾರ್'** ಎಂಬುದನ್ನು ಭಗವಾನ್ ಶ್ರೀರಮಣ ಮಹರ್ಷಿಗಳೇ **उपदेशसारः** ಎಂಬ ಹೆಸರಿನಿಂದ ತೆಲುಗು, ಸಂಸ್ಕೃತ ಮತ್ತು ಮಲೆಯಾಳಂ ಭಾಷೆಗಳಿಗೆ ಅನುವಾದ ಮಾಡಿರುತ್ತಾರೆ. ಕೇವಲ ಮೂವತ್ತೇ ಶ್ಲೋಕಗಳಲ್ಲಿ ವೇದಾಂತ ದರ್ಶನದ ಸಾಧನಗಳನ್ನೂ ಸಂದೇಶಗಳನ್ನೂ ಶ್ರೀರಮಣರು **'ಉಪದೇಶ ಸಾರ'** ಗ್ರಂಥದಲ್ಲಿ ತಿಳಿಸಿರುತ್ತಾರೆ. ಈ ಗ್ರಂಥವು ಈಗ ಓದುಗರ ಕೈಗಳಲ್ಲಿದೆ.

೩. **श्रीरमणगीता** : ಹದಿನೆಂಟು ಅಧ್ಯಾಯಗಳಿರುವ **श्रीरमणगीता** ಪುಸ್ತಕದಲ್ಲಿ ಶ್ರೀರಮಣರ ಸುಂದರ ಸಂದೇಶಗಳಿರುತ್ತವೆ. ನೂರಾರು ತತ್ತ್ವ ಜಿಜ್ಞಾಸುಗಳ ಪ್ರಶ್ನೆಗಳಿಗೆ ಶ್ರೀರಮಣರು ಕೊಟ್ಟಿರುವ ಅನುರೂಪವಾದ ಉತ್ತರಗಳು ಈ ಗ್ರಂಥದಲ್ಲಿ ಇರುತ್ತವೆ. ಹೀಗೆ ಈ ಮೂರೂ **'ಶ್ರೀರಮಣ ಪ್ರಸ್ಥಾನತ್ರಯೀ'** ಗ್ರಂಥಗಳು ಸಂಸ್ಕೃತದಲ್ಲಿರುತ್ತವೆ. ಸಾಂಪ್ರದಾಯಿಕ ಸದ್ಗುರುಗಳ ಸಹಾಯದಿಂದ ಇವುಗಳನ್ನು ಅಧ್ಯಯನಮಾಡಿದರೆ ಅಂಥವರಿಗೆ ಶ್ರೀರಮಣರ ಸಂದೇಶಗಳು ಅರ್ಥವಾಗುತ್ತವೆ.

**॥ ಓಂ ನಮೋ ಭಗವತೇ ಶ್ರೀರಮಣಾಯ ॥**

# 34. ರಮಣರ ಉಪದೇಶದಲ್ಲಿ ಆಶ್ಚರ್ಯವೇನಿಲ್ಲ!

ಭಗವಾನ್ ಶ್ರೀರಮಣ ಮಹರ್ಷಿಗಳನ್ನು ಇಡೀ ಅಧ್ಯಾತ್ಮಜಗತ್ತೇ ಜೀವನ್ಮುಕ್ತರೆಂದೂ ದಕ್ಷಿಣಾಮೂರ್ತಿಸ್ವರೂಪರೆಂದೂ ಬ್ರಹ್ಮನಿಷ್ಠರೆಂದೂ ಕೊಂಡಾಡುತ್ತದೆ. ಹೌದು, ಇದು ನೂರಕ್ಕೆ ನೂರು ಸತ್ಯ; ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಶ್ರೀರಮಣರ ಉಪದೇಶಗಳನ್ನು ಶ್ರದ್ಧೆಯಿಂದ ಶ್ರವಣಮಾಡಿ, ಮನನನಿದಿಧ್ಯಾಸನಗಳನ್ನು ಮಾಡಿದಾಗ ಈ ಮಾತುಗಳು **ಸತ್ಯಸ್ಯ ಸತ್ಯಂ** ಎಂದು ಎಲ್ಲಾ ಮುಮುಕ್ಷು ಜನಗಳಿಗೂ ತಿಳಿಯುತ್ತದೆ.

**ಅಹಂ**ಕಾರವೇ ಎಲ್ಲ ಸಮಸ್ಯೆಗಳಿಗೂ ಮೂಲ; **ಅಹಂ**ಪ್ರತ್ಯಯದಿಂದಲೇ ಜನ್ಮಾಂತರ ಲೋಕಾಂತರ ದೇಹಾಂತರಪ್ರಾಪ್ತಿ; **ಅಹಂ**ನಿಂದಲೇ ಇತರ ಎಲ್ಲಾ ವೃತ್ತಿಗಳೂ ಬದುಕಿರುತ್ತವೆ. ಆದ್ದರಿಂದ ಈ **ಅಹಂ**ನ ಮೂಲಕ್ಕೆ ಹೋಗಬೇಕು. ಅಹಂಕಾರದ ಮೂಲವೇ ಆತ್ಮನು. ಆತ್ಮನಿಂದಲೇ ಬಂದು, ಆತ್ಮನಿಂದಲೇ ಬದುಕಿದ್ದು, ಆತ್ಮನಲ್ಲಿಯೇ ಅಹಂಕಾರವು ಕರಗಿಹೋಗುತ್ತದೆಯಾದ್ದರಿಂದ ಅಹಂಕಾರವೆಂಬುದು ಕೇವಲ ಜೊಳ್ಳು, ಅಹಂಪ್ರತ್ಯಯವು ಸುಳ್ಳು, ಅಹಂಕಾರವು ಕೇವಲ ಆಭಾಸ ಮಾತ್ರ; ಈ ಅಹಂಕಾರಕ್ಕೆ ಆಸ್ಪದನೇ ಆತ್ಮ, ಆತ್ಮನೇ ತಾನೆಂದು ತಿಳಿದಾಗ ಜನ್ಮಮರಣಗಳಾಗಲೀ, ಸುಖದುಃಖಗಳಾಗಲೀ, ಪುಣ್ಯಪಾಪಗಳಾಗಲೀ –ಯಾವುದೂ ಇಲ್ಲ. ಇಷ್ಟೇ ಸಕಲ ವೇದಾಂತಶಾಸ್ತ್ರಗಳ ಸಾರ–ಎಂದೆಲ್ಲ ಶ್ರೀರಮಣರು ಉಪದೇಶಿಸಿದ್ದಾರೆ. ಇದು ಅವರ ಸ್ವಾನುಭವದ ಉದ್ಗಾರ!

ಶ್ರೀರಮಣರ ಈ ಮಾತುಗಳನ್ನು ಕೇಳುತ್ತಿದ್ದರೆ, ಎಂಥವರಿಗಾದರೂ ಅಬ್ಬಾ! ಏನಿದು ಉಪದೇಶ! ಎಂಥ ಅದ್ಭುತವಿದು! ಆಶ್ಚರ್ಯ ಉಪದೇಶ! ಎಂಥ ಮೇಲ್ಮಟ್ಟದ ಉಪದೇಶ! ಎಂದು ಆಶ್ಚರ್ಯವಾಗುವುದು ಸಹಜವೇ ಆಗಿದೆ.

ಆ ದ ರೇ .... ನನಗೇನೂ ಇದರಲ್ಲಿ ಆಶ್ಚರ್ಯವಿಲ್ಲ! ಏಕೆಂದರೆ ಇಷ್ಟೂ, ವೇದಾಂತದ ಸರಳ ಸಹಜ ಸುಲಭ ಸಂದೇಶಗಳೇ ಆಗಿವೆ. ೧೯೫೫ ರಿಂದ ಇಂದಿನ ವರೆಗೂ, ಅಂದರೆ ಸುಮಾರು ಐವತ್ತಾರುವರ್ಷಗಳಿಂದಲೂ ಹಗಲೂ ಇರುಳೂ, ಅಮಾವಾಸ್ಯೆಯೂ ಮಂಗಳವಾರವೂ ಯಾವಾಗಲೂ **ಶಾಂಕರಭಾಷ್ಯ ಗ್ರಂಥಗಳ ಅಧ್ಯಯನ ಅಧ್ಯಾಪನಗಳಲ್ಲಿಯೇ ತಲ್ಲೀನನಾಗಿರುವ ನನಗೆ ಶ್ರೀರಮಣರ ಉಪದೇಶಗಳಲ್ಲಿ** ವಿಶೇಷಗಳೇನೂ ಕಾಣುತ್ತಿಲ್ಲ; ಮತ್ತು ಶ್ರೀಗೌಡಪಾದಾಚಾರ್ಯರ ಮಾಂಡೂಕ್ಯಕಾರಿಕೆಗಳನ್ನು ನನ್ನ ಸದ್ಗುರುಗಳಿಂದಲೇ ಅಧ್ಯಯನಮಾಡಿರುವ ನನಗೆ ಶ್ರೀರಮಣರ ಉಪದೇಶಗಳಲ್ಲಿ ಆಶ್ಚರ್ಯವೇನೂ ಕಾಣುತ್ತಿಲ್ಲ. ಏಕೆಂದರೆ ಗೌಡಪಾದರೆಂದರೆ ಶಂಕರರೇ, ಶಂಕರರೇ ರಮಣರು. ರಮಣರೆಂದರೆ ನನ್ನ ಸದ್ಗುರುಗಳೇ ಎಂಬುದು ನನ್ನ ದೃಢನಿಶ್ಚಯವು.

# 35. ಅಮನಸ್ಕಯೋಗಿ ಶ್ರೀರಮಣರು

**ಯೋಗಿ** ಎಂದ ಕೂಡಲೇ ಸಾಮಾನ್ಯವಾಗಿ **ಹಠಯೋಗಿ** ಎಂದೇ ನಾವು ತಿಳಿಯುತ್ತೇವೆ. **ಯೋಗ**ವನ್ನು ಮಾಡುವ ಮಹಾತ್ಮನೇ ಯೋಗಿ. **ಯೋಗ** ಎಂದರೆ **ಯೋಗಶ್ಚಿತ್ತವೃತ್ತಿನಿರೋಧಃ**—ಎಂಬ ಪಾತಂಜಲಯೋಗಸೂತ್ರದಂತೆ, ಚಿತ್ತದ ವೃತ್ತಿಗಳನ್ನೆಲ್ಲ ತಡೆಹಿಡಿಯುವುದು ಎಂದೇ ಎಲ್ಲಾ ಯೋಗಿಗಳೂ ಭಾವಿಸಿರುತ್ತಾರೆ. ಇದು ದಿಟವೂ ಹೌದು; ಏಕೆಂದರೆ ಚಂಚಲವಾದ ಪ್ರಮಾಥಿಯಾದ ಬಲವೂ ದೃಢವೂ ಆದ ಮನಸ್ಸನ್ನು ತಡೆಹಿಡಿದು, ಅದನ್ನು ಏಕಾಗ್ರತೆಯಿಂದ ಆತ್ಮನಲ್ಲಿ ನಿಶ್ಚಲವಾಗಿ ನೆಲೆಗೊಳಿಸುವುದು ಎಂಬುದು ಅಷ್ಟೇನೂ ಸುಲಭವಲ್ಲ! **ಮನೋನಿಗ್ರಹ**ವೆಂಬುದು ಅತ್ಯಂತ ಕಷ್ಟತಮವಾದ ತಪಸ್ಸೇ ಹೌದು; ಎಷ್ಟೇ ಮನೋನಿಗ್ರಹ, ಮನೋಲಯವನ್ನು ಮಾಡಿಕೊಂಡರೂ "**ನಾಯಿಬಾಲ ಡೊಂಕು**" ಎಂಬಂತೆ, ಆ ಮನಸ್ಸು ಹೇಗೋ ಬಹಿರ್ಮುಖವಾಗಿಬಿಟ್ಟು ಎಂಥೆಂಥ ಯೋಗಿಗಳಿಗೂ ಮಣ್ಣುಮುಕ್ಕಿಸಿಬಿಡುತ್ತದೆ. ಏಕೆಂದರೆ ಇದು ಚಿತ್ತ! ಇದು ಮನಸ್ಸು! ಇದು ಏಳು ಹೆಡೆಗಳುಳ್ಳ ಭಯಂಕರವಾದ ಕಾಳಿಂಗಸರ್ಪ! ನೆನಪಿರಲಿ. ಮನಸ್ಸಿನೊಡನೆ ಸರಸವೆಂದರೆ ಕಾಳಿಂಗಸರ್ಪದೊಡನೆ ಸರಸವಿದ್ದಂತೆ!

ಈ ರಹಸ್ಯವನ್ನು ಅರ್ಥಮಾಡಿಕೊಂಡು ಭಗವಾನ್ ಶ್ರೀರಮಣ ಮಹರ್ಷಿಗಳು ಮನೋನಿಗ್ರಹಕ್ಕೆ ಹೆಚ್ಚಿನ ಒತ್ತನ್ನು ಕೊಡದೇ; ಮನೋಲಯದ ಎಂದರೆ ಅಮನಸ್ಕದ, ಅಂದರೆ ಮನಸ್ಸೇ ಇಲ್ಲದ, ಅಂದರೆ ಆತ್ಮನಿಗಿಂತ ಭಿನ್ನವಾಗಿ ಮನಸ್ಸೆಂಬ ವಸ್ತುವೇ ಇಲ್ಲ—ಎಂಬ ರಾಜಮಾರ್ಗವನ್ನು ವಿಚಾರದ ಬಲದಿಂದ ಕಂಡುಕೊಂಡ ಮಹಾಧೀರರು. ಹಗ್ಗದಲ್ಲಿ ಭ್ರಾಂತಿಯಿಂದ ಸರ್ಪವು ತೋರುವಂತೆ, ಅಂದರೆ ಹಗ್ಗಕ್ಕಿಂತ ಭಿನ್ನವಾಗಿ ಸರ್ಪವು ಇಲ್ಲವೇ ಇಲ್ಲದಿರುವಂತೆಯೇ; **ಆತ್ಮನಲ್ಲಿ ಮನಸ್ಸು ಕಲ್ಪಿತವಾಗಿದೆ, ಮನಸ್ಸೆಂಬ ಪದಾರ್ಥವು ಸತ್ಯವಾಗಿ ಇಲ್ಲವೇ ಇಲ್ಲ ಎಂಬ ಶುಕಮಾರ್ಗವನ್ನು ಮುಮುಕ್ಷುಜಗತ್ತಿಗೆ ಸ್ವಾನುಭವದಿಂದ ಉಪದೇಶಿಸಿದ ಧೀರಾಧಿಧೀರ, ಮಹಾಧೀರ, ಪ್ರಚಂಡಧೀರ, ಅನಿತರಸಾಧಾರಣ, ಅದ್ಭುತ, ಪರಮಾದ್ಭುತ, ಮಹಾ ಪ್ರಚಂಡ, ಅದ್ವಿತೀಯ ಬ್ರಹ್ಮನಿಷ್ಠವೇದಾಂತಸದ್ಗುರುಗಳೆಂದರೆ ಭಗವಾನ್ ಶ್ರೀರಮಣಮಹರ್ಷಿಗಳು.**

**ಮಾನಸಂ ತು ಕಿಂ ಮಾರ್ಗಣೇ ಕೃತೇ। ನೈವ ಮಾನಸಂ ಮಾರ್ಗ ಆರ್ಜವಾತ್**

ಎಂದು ಶ್ರೀರಮಣರು ಸ್ವಾನುಭವದಿಂದ ಸಹಜವಾಗಿ ಉಪದೇಶಿಸಿದ್ದಾರೆ.

"**ಮನಸ್ಸೇ ಇಲ್ಲ**" ಎಂದಿರುವ ಶ್ರೀರಮಣರನ್ನು ನಾವುಗಳು ಪ್ರೀತಿಯಿಂದ "**ಅಮನಸ್ಕಯೋಗಿ**", "**ಅಮನೋಯೋಗಿ**" ಎಂದು ಕರೆಯಬಹುದಲ್ಲವೇ?

# 36. ಶ್ರೀಗೌಡಪಾದಾಚಾರ್ಯರೂ ಶ್ರೀರಮಣರೂ

ಅದ್ವೈತವೇದಾಂತದಲ್ಲಿ ಶ್ರೀಗೌಡಪಾದಾಚಾರ್ಯರಿಗೆ ಅಸಾಧಾರಣಸ್ಥಾನವಿದೆ. ಅದ್ವೈತವೇದಾಂತಭಾಷ್ಯಕಾರರಾದ ಭಗವಾನ್ ಶ್ರೀಶಂಕರಭಗವತ್ಪಾದಾಚಾರ್ಯರು ಶ್ರೀಗೌಡಪಾದಾಚಾರ್ಯರನ್ನು **ಸಂಪ್ರದಾಯವಿದರು** ಎಂದು ಗೌರವದಿಂದ ಆದರಿಸುತ್ತಾರೆ. ಗೌಡಪಾದಾಚಾರ್ಯರವರ ಮಾಂಡೂಕ್ಯಕಾರಿಕೆಗಳನ್ನು ಅಧ್ಯಯನಮಾಡಿದವರಿಗೆ ಶ್ರೀಶಂಕರರ ಈ ಮಾತು ಸತ್ಯವೆನಿಸುತ್ತದೆ. ಶ್ರೀಗೌಡಪಾದಾಚಾರ್ಯರು ಶ್ರೀಶಂಕರರ ಗುರುಗಳಾದ ಶ್ರೀಗೋವಿಂದ ಭಗವತ್ಪಾದಾಚಾರ್ಯರವರ ಗುರುಗಳು. ಹೀಗಾಗಿ ಶ್ರೀಗೌಡಪಾದಾಚಾರ್ಯರು ಶ್ರೀಶಂಕರರಿಗೆ ಪರಮಗುರುಗಳಾಗಿರುತ್ತಾರೆ.

ಶ್ರೀಗೌಡಪಾದಾಚಾರ್ಯರು ಕ್ರಿಸ್ತಶಕ ಏಳನೆಯ ಶತಮಾನದ ಜೀವನ್ಮುಕ್ತರಾದರೆ, ಭಗವಾನ್ ಶ್ರೀರಮಣರು ಇಪ್ಪತ್ತನೆಯ ಶತಮಾನದ ಜೀವನ್ಮುಕ್ತಪುಂಗವರು! ಇವರಿಬ್ಬರೂ ಶ್ರೋತ್ರಿಯಬ್ರಹ್ಮನಿಷ್ಠರಾಗಿದ್ದ ಬ್ರಹ್ಮಜ್ಞಾನಿಪುಂಗವರೇ ಆಗಿದ್ದರು ಎಂಬುದರಲ್ಲಿ ಸಂಶಯವಿಲ್ಲ. ಇವರಿಬ್ಬರೂ ಉಪರತಿಪ್ರಿಯರಾಗಿದ್ದ ವೈರಾಗ್ಯ ಚಕ್ರವರ್ತಿಗಳೇ ಆಗಿದ್ದರು. ಇವರಿಬ್ಬರ ಉಪದೇಶವೂ ಅಮನಸ್ಕ ಯೋಗವೇ, ಅಸ್ಪರ್ಶಯೋಗವೇ, ಅದ್ವೈತೋಪದೇಶವೇ ಆಗಿರುತ್ತದೆ.

**ನ ನಿರೋಧೋ ನ ಚೋತ್ಪತ್ತಿಃ ನ ಬದ್ಧೋ ನ ಚ ಸಾಧಕಃ।**
**ನ ಮುಮುಕ್ಷುರ್ನ ವೈ ಮುಕ್ತಃ ಇತ್ಯೇಷಾ ಪರಮಾರ್ಥತಾ॥** ೨-೩೨

**ಆತ್ಮಸತ್ಯಾನುಬೋಧೇನ ನ ಸಂಕಲ್ಪಯತೇ ಯದಾ।**
**ಅಮನಸ್ತಾಂ ತದಾ ಯಾತಿ ಗ್ರಾಹ್ಯಾಭಾವೇ ತದಗ್ರಹಮ್॥** ೩-೩೨

**ಅಜೇ ಸಾಮ್ಯೇ ತು ಯೇ ಕೇಚಿತ್ ಭವಿಷ್ಯಂತಿ ಸುನಿಶ್ಚಿತಾಃ।**
**ತೇ ಹಿ ಲೋಕೇ ಮಹಾಜ್ಞಾನಾಃ ತಚ್ಚ ಲೋಕೋ ನ ಗಾಹತೇ॥**

—ಗೌಡಪಾದೀಯಮಾಂಡೂಕ್ಯಕಾರಿಕಾ ೪-೮೫

**ಎಂದು ಶ್ರೀಗೌಡಪಾದಾಚಾರ್ಯರು ಏಳನೆಯ ಶತಮಾನದಲ್ಲಿ ಹೇಳಿರುವುದನ್ನು ಇಪ್ಪತ್ತನೆಯ ಶತಮಾನದಲ್ಲಿ ಸ್ವಾನುಭವದಿಂದ ಕಂಡುಕೊಂಡು, ಮುಮುಕ್ಷುಜನಗಳಿಗೆ ಉಪದೇಶಿಸಿದ ದಕ್ಷಿಣಾಮೂರ್ತಿ ಸದ್ಗುರುಗಳೇ ನಮ್ಮ ಪ್ರೀತಿಯ ಶ್ರೀರಮಣರು. ಶ್ರೀಗೌಡಪಾದರ ಹಾಗೂ ಶ್ರೀರಮಣರ ಜೀವನ, ಸಾಧನ, ಸಂದೇಶಗಳಲ್ಲಿ ಯಾವ ಭೇದವೂ ಇಲ್ಲ. ಇವರಿಬ್ಬರೂ ಅಮನಸ್ಕಯೋಗಿಗಳೇ; ಇವರಿಬ್ಬರೂ ಮಹಾಮೌನಿಗಳೇ; ಇವರಿಬ್ಬರೂ ಬ್ರಹ್ಮನಿಷ್ಠರಾದ ಬ್ರಹ್ಮಸ್ವರೂಪರೇ; ಇವರಿಬ್ಬರಿಗೂ ನಮೋ ನಮಃ.**

# 37. ಶ್ರೀರಮಣಾಷ್ಟಕ ಸ್ತೋತ್ರಮ್

ನತ್ವಾ ಶ್ರೀದಕ್ಷಿಣಾಮೂರ್ತಿಂ ಜ್ಞಾನಮೂರ್ತಿಂ ಜಗದ್ಗುರುಮ್ ।
ಮೌನವ್ಯಾಖ್ಯಾನಕರ್ತಾರಂ **ರಮಣಂ ಸದ್ಗುರುಂ** ತಥಾ ॥

ಪಠೇತ್ **ಶ್ರೀರಮಣಸ್ತೋತ್ರಮ್** ಅಷ್ಟಕಂ ಮೋಕ್ಷದಾಯಕಮ್ ।
ಜ್ಞಾನವೈರಾಗ್ಯಸೌಭಾಗ್ಯದಾಯಕಂ ಸೌಖ್ಯದಾಯಕಮ್ ॥

ಬ್ರಹ್ಮನಿಷ್ಠಂ ಸತ್ಯನಿಷ್ಠಂ ತಪೋನಿಷ್ಠಮ್ ಅಕಲ್ಮಷಮ್ ।
ಜ್ಞಾನನಿಷ್ಠಂ ಮೋಕ್ಷನಿಷ್ಠಮ್ **ರಮಣಂ ಪ್ರಣಮಾಮ್ಯಹಮ್** ॥ ೧ ॥

ಯೋಗಿರಾಜಂ ತ್ಯಾಗಿರಾಜಂ ಜ್ಞಾನಿರಾಜಂ ನಿರಂಜನಮ್ ।
ಯತಿರಾಜಂ ಮುಕ್ತರಾಜಂ **ರಮಣಂ ಪ್ರಣಮಾಮ್ಯಹಮ್** ॥ ೨ ॥

ಅಹಂಕಾರವಿದೂರಂ ತಮ್ ಅಹಂಕಾರಸ್ಯ ಸಾಕ್ಷಿಣಮ್ ।
ನಿತ್ಯಶುದ್ಧಂ ನಿರ್ವಿಕಾರಂ **ರಮಣಂ ಪ್ರಣಮಾಮ್ಯಹಮ್** ॥ ೩ ॥

ಸಚ್ಚಿದಾನಂದಬ್ರಹ್ಮಿಷ್ಠಂ ಸಚ್ಚಿದಾನಂದದಾಯಕಮ್ ।
ಗುರುರಾಜಂ ಮೌನಿರಾಜಂ **ರಮಣಂ ಪ್ರಣಮಾಮ್ಯಹಮ್** ॥ ೪ ॥

ಅರುಣಾಚಲಸದ್ರೂಪಮ್ ಅರುಣಾಚಲವಾಸಿನಮ್ ।
ಕೂಟಸ್ಥಮಚಲಂ ಶಾಂತಂ **ರಮಣಂ ಪ್ರಣಮಾಮ್ಯಹಮ್** ॥ ೫ ॥

ಮಾತೃಭಕ್ತಮ್ ಈಶಭಕ್ತಂ ದೇಶಭಕ್ತಂ ಜಗದ್ಗುರುಮ್ ।
ವೇದವೇದಾಂತಸಾರಜ್ಞಂ **ರಮಣಂ ಪ್ರಣಮಾಮ್ಯಹಮ್** ॥ ೬ ॥

ದೇಹಾಧ್ಯಾಸವಿನಿರ್ಮುಕ್ತಂ ಪರಬ್ರಹ್ಮಸ್ವರೂಪಿಣಮ್ ।
ಕೌಪೀನಧಾರಿಣಂ ಧೀರಂ **ರಮಣಂ ಪ್ರಣಮಾಮ್ಯಹಮ್** ॥ ೭ ॥

ಅಶರೀರಂ ಮಹಾತ್ಮಾನಂ ಜನ್ಮಮೃತ್ಯುವಿವರ್ಜಿತಮ್ ।
ಅಮೃತಂ ನಿರ್ಭಯಂ ಪೂರ್ಣಂ **ರಮಣಂ ಪ್ರಣಮಾಮ್ಯಹಮ್** ॥ ೮ ॥

ಯಃ ಪಠೇತ್ ಸತತಂ ಭಕ್ತ್ಯಾ **ರಮಣಸ್ಯಾಷ್ಟಕಂ** ಶುಭಮ್ ।
ಜ್ಞಾನಮೋಕ್ಷಪ್ರದಂ ಶ್ರೇಷ್ಠಂ ಸರ್ವದುಃಖನಿವಾರಕಮ್ ॥

ಸರ್ವಾನ್ ಕಾಮಾನ್ ಅವಾಪ್ನೋತಿ ಬ್ರಹ್ಮಜ್ಞಾನಂ ಪರಂ ಸುಖಮ್ ।
ಜೀವನ್ಮುಕ್ತಿಂ ಪರಾಂ ಶಾಂತಿಂ **ರಮಣಸ್ಯ** ಪ್ರಸಾದತಃ ॥

# ಭಗವಾನ್ ಶ್ರೀರಮಣ ಮಹರ್ಷಿಗಳ ಉಪದೇಶಸಾರಃ

## ಮೂಲಮಾತ್ರಮ್

ಕರ್ತುರಾಜ್ಞಯಾ ಪ್ರಾಪ್ಯತೇ ಫಲಮ್ ।
ಕರ್ಮ ಕಿಂ ಪರಂ ಕರ್ಮ ತಜ್ಜಡಮ್ ॥ ೧ ॥

ಕೃತಿಮಹೋದಧೌ ಪತನಕಾರಣಮ್ ।
ಫಲಮಶಾಶ್ವತಂ ಗತಿನಿರೋಧಕಮ್ ॥ ೨ ॥

ಈಶ್ವರಾರ್ಪಿತಂ ನೇಚ್ಛಯಾ ಕೃತಮ್ ।
ಚಿತ್ತಶೋಧಕಂ ಮುಕ್ತಿಸಾಧಕಮ್ ॥ ೩ ॥

ಕಾಯವಾಙ್ಮನಃಕಾರ್ಯಮುತ್ತಮಮ್ ।
ಪೂಜನಂ ಜಪಶ್ಚಿಂತನಂ ಕ್ರಮಾತ್ ॥ ೪ ॥

ಜಗತ ಈಶಧೀಯುಕ್ತಸೇವನಮ್ ।
ಅಷ್ಟಮೂರ್ತಿಭೃದ್ ದೇವಪೂಜನಮ್ ॥ ೫ ॥

ಉತ್ತಮಸ್ತವಾದುಚ್ಚಮಂದತಃ ।
ಚಿತ್ತಜಂ ಜಪಧ್ಯಾನಮುತ್ತಮಮ್ ॥ ೬ ॥

ಆಜ್ಯಧಾರಯಾ ಸ್ರೋತಸಾ ಸಮಮ್ ।
ಸರಲಚಿಂತನಂ ವಿರಲತಃ ಪರಮ್ ॥ ೭ ॥

ಭೇದಭಾವನಾತ್ ಸೋಽಹಮಿತ್ಯಸೌ ।
ಭಾವನಾಽಭಿದಾ ಪಾವನೀ ಮತಾ ॥ ೮ ॥

ಭಾವಶೂನ್ಯಸದ್ಭಾವಸುಸ್ಥಿತಿಃ ।
ಭಾವನಾಬಲಾತ್ ಭಕ್ತಿರುತ್ತಮಾ ॥ ೯ ॥

ಹೃತ್ಸ್ಥಲೇ ಮನಃ ಸ್ವಸ್ಥತಾ ಕ್ರಿಯಾ ।
ಭಕ್ತಿಯೋಗಬೋಧಾಶ್ಚ ನಿಶ್ಚಿತಮ್ ॥ ೧೦ ॥

ವಾಯುರೋಧನಾತ್ ಲೀಯತೇ ಮನಃ।
ಜಾಲಪಕ್ಷಿವದ್ ರೋಧಸಾಧನಮ್ ॥ ೧೧ ॥

ಚಿತ್ತವಾಯವಶ್ಚಿತ್ಕ್ರಿಯಾಯುತಾಃ।
ಶಾಖಯೋರ್ದ್ವಯೀ ಶಕ್ತಿಮೂಲಕಾ ॥ ೧೨ ॥

ಲಯವಿನಾಶನೇ ಉಭಯರೋಧನೇ।
ಲಯಗತಂ ಪುನರ್ಭವತಿ ನೋ ಮೃತಮ್ ॥ ೧೩ ॥

ಪ್ರಾಣಬಂಧನಾಲ್ಲೀನಮಾನಸಮ್।
ಏಕಚಿಂತನಾನ್ನಾಶಮೇತ್ಯದಃ ॥ ೧೪ ॥

ನಷ್ಟಮಾನಸೋತ್ಕೃಷ್ಟಯೋಗಿನಃ।
ಕೃತ್ಯಮಸ್ತಿ ಕಿಂ ಸ್ವಸ್ಥಿತಿಂ ಯತಃ ॥ ೧೫ ॥

ದೃಶ್ಯವಾರಿತಂ ಚಿತ್ತಮಾತ್ಮನಃ।
ಚಿತ್ತ್ವದರ್ಶನಂ ತತ್ತ್ವದರ್ಶನಮ್ ॥ ೧೬ ॥

ಮಾನಸಂ ತು ಕಿಂ ಮಾರ್ಗಣೇ ಕೃತೇ।
ನೈವ ಮಾನಸಂ ಮಾರ್ಗ ಆರ್ಜವಾತ್ ॥ ೧೭ ॥

ವೃತ್ತಯಸ್ತ್ವಹಂವೃತ್ತಿಮಾಶ್ರಿತಾಃ।
ವೃತ್ತಯೋ ಮನೋ ವಿದ್ಧ್ಯಹಂ ಮನಃ ॥ ೧೮ ॥

ಅಯಮಹಂ ಕುತೋ ಭವತಿ ಚಿನ್ವತಃ।
ಅಯಿ ಪತತ್ಯಹಂ ನಿಜವಿಚಾರಣಮ್ ॥ ೧೯ ॥

ಅಹಮಿ ನಾಶಭಾಜ್ಯಹಮಹಂತಯಾ।
ಸ್ಫುರತಿ ಹೃತ್ಸ್ವಯಂ ಪರಮಪೂರ್ಣಸತ್ ॥ ೨೦ ॥

ಇದಮಹಂಪದಾಭಿಖ್ಯಮನ್ವಹಮ್ ।
ಅಹಮಿ ಲೀನಕೇಽಪ್ಯಲಯಸತ್ತಯಾ ॥ ೨೧ ॥

ವಿಗ್ರಹೇಂದ್ರಿಯಪ್ರಾಣಧೀತಮಃ ।
ನಾಹಮೇಕಸತ್ತಜ್ಜಡಂ ಹ್ಯಸತ್ ॥ ೨೨ ॥

ಸತ್ತ್ವಭಾಸಿಕಾ ಚಿತ್ ಕ್ವ ವೇತರಾ ।
ಸತ್ತಯಾ ಹಿ ಚಿತ್ ಚಿತ್ತಯಾ ಹ್ಯಹಮ್ ॥ ೨೩ ॥

ಈಶಜೀವಯೋರ್ವೇಷಧೀಭಿದಾ ।
ಸತ್ಸ್ವಭಾವತೋ ವಸ್ತು ಕೇವಲಮ್ ॥ ೨೪ ॥

ವೇಷಹಾನತಃ ಸ್ವಾತ್ಮದರ್ಶನಮ್ ।
ಈಶದರ್ಶನಂ ಸ್ವಾತ್ಮರೂಪತಃ ॥ ೨೫ ॥

ಆತ್ಮಸಂಸ್ಥಿತಿಃ ಸ್ವಾತ್ಮದರ್ಶನಂ ।
ಆತ್ಮನಿರ್ದ್ವಯಾದಾತ್ಮನಿಷ್ಠತಾ ॥ ೨೬ ॥

ಜ್ಞಾನವರ್ಜಿತಾಽಜ್ಞಾನಹೀನಸತ್ ।
ಜ್ಞಾನಮಸ್ತಿ ಕಿಂ ಜ್ಞಾತುಮಂತರಮ್ ॥ ೨೭ ॥

ಕಿಂ ಸ್ವರೂಪಮಿತ್ಯಾತ್ಮದರ್ಶನೇ ।
ಅವ್ಯಯಾಽಭವಾಽಽಪೂರ್ಣಚಿತ್ಸುಖಮ್ ॥ ೨೮ ॥

ಬಂಧಮುಕ್ತ್ಯತೀತಂ ಪರಂ ಸುಖಮ್ ।
ವಿಂದತೀಹ ಜೀವಸ್ತು ದೈವಿಕಃ ॥ ೨೯ ॥

ಅಹಮಪೇತಕಂ ನಿಜವಿಭಾನಕಮ್ ।
ಮಹದಿದಂ ತಪೋ ರಮಣವಾಗಿಯಮ್ ॥ ೩೦ ॥

**॥ ಇತಿ ಶ್ರೀರಮಣಮಹರ್ಷಿವಿರಚಿತಃ ಉಪದೇಶಸಾರಃ ಸಮಾಪ್ತಃ ॥**

**॥ ಓಂ ತತ್ ಸತ್ ॥**

## ವೇದಾಂತಚಕ್ರವರ್ತಿ, ಮಹಾಮಹೋಪಾಧ್ಯಾಯ ವಿದ್ವಾನ್ ಡಾ॥ ಕೆ. ಜಿ. ಸುಬ್ರಾಯಶರ್ಮಾರವರ ವೇದಾಂತ ಗ್ರಂಥಗಳು

1. "ವಿವೇಕಭಾಸ್ಕರ"
2. "ಶಾಂಕರ ಸಂವತ್ಸರ"
3. "ವೇದಾಂತ ಸಂವತ್ಸರ"
4. "ಗೀತಾ ಸಂವತ್ಸರ"
5. "ಸುಭಾಷಿತ ಸಂವತ್ಸರ"
6. "ಪ್ರಬೋಧ ಚಿಂತಾಮಣಿ"
7. "ಜ್ಞಾನಾಮೃತಬಿಂದು"
8. "ಗೀತೋಪದೇಶಾಮೃತ"
9. "ಜರ್ಮನಿಯಲ್ಲಿ ಶರ್ಮರು"
10. ವಿದ್ವಾನ್ ಕೆ. ಜಿ. ಸುಬ್ರಾಯಶರ್ಮಾ
11. "ವ್ಯಾಸ ಪೂರ್ಣಿಮಾ"
12. "ಕೇನ ರಸಾಯನ"
13. "ಜೀವನ್ಮುಕ್ತ ಚತುಷ್ಟಯ"
14. "ಶಿವರಾತ್ರಿ"
15. "ನವೋಪನಿಷದಃ"
16. "ಶಾಂತಿಮಂತ್ರಗಳು"
17. "ವೇದಮಹಿಮೆ"
18. "50 Reflections on Morals"
19. "ಪೀಯೂಷ ಧಾರಾ"
20. "ಆದಿಗುರು ಶಂಕರ"
21. "48 'ಅಷ್ಟಕ' ಸ್ತೋತ್ರಗಳು"
22. 'ಕನ್ನಡ ಶಂಕರ"
23. "ಆರಾಧನ ಸಂದೇಶ"
24. "ಸರಳ ರಮಣ"
25. "ನ ಹಿ ಜ್ಞಾನೇನ ಸದೃಶಂ"
26. "ಉಪದೇಶಸಿಂಚನಂ"
27. "ಸುದಿನಂ"
28. "ಶಂಕರಜಯಂತೀ"
29. "ಬಾಲರಾಮಾಯಣಂ"
30. "ಸಂದೇಶಾಮೃತಂ"
31. "ವಿಭೂತಿರೂಪಿಕೃಷ್ಣ"
32. "ಅಧ್ಯಾರೋಪಾಪವಾದ"
33. "ಶಂಕರ Ph.D."
34. "ಗೌಡಪಾದಾಮೃತ"
35. "ವೇದಾಂತಮಕರಂದ"
36. "ಶ್ರೀರಮಣಸುಧಾ"
37. "ಧರ್ಮ-ವೇದ-ಬ್ರಹ್ಮ"
38. "ಸದ್ಗುರೂಪಾಸನಂ"
39. "ಜನ್ಮಾಂತರ"
40. "ಗೀತಾಕಲ್ಪತರು"
41. "ಮಹರ್ಷಿಗಳು"
42. "ಉಪನಯನಂ"
43. "ಔಪನಿಷದ ಪುರುಷ"
44. "ಸಂಸ್ಕೃತ ವೈಭವ"
45. "ತೈತ್ತಿರೀಯದ ತಿರುಳು"
46. "ರಾಮಾಂಜನೇಯ"
47. ವೇದಾಂತದಲ್ಲಿನ ಪದಗಳೂ ಅರ್ಥಗಳೂ
48. "ತತ್ತ್ವಮಸಿ"
49. "ಬ್ರಹ್ಮಜ್ಞಾನಫಲಂ"
50. "ಜ್ಞಾನಸಾಧನಗಳು"
51. "108 'ಅಷ್ಟಕ' ಸ್ತೋತ್ರಗಳು"
52. "ಚತುಷ್ಟಯ ಸಂಗ್ರಹ"
53. "ಸಂಗ್ರಾಹಕ ಶ್ಲೋಕಗಳು"
54. "ಶ್ರೀಶ್ರೀಗಳ ಸಂಶೋಧನೆ"
55. "ಮಹರ್ಷಿಗಳ 'ಅಷ್ಟಕ' ಸ್ತೋತ್ರಗಳು"
56. "ಶಾಂಕರ ಮಕರಂದ"
57. "ನೀತಿ ಶ್ಲೋಕಗಳು"
58. "ಕೈವಲ್ಯೋಪನಿಷತ್"
59. "ವಿವೇಕ ರತ್ನ"
60. "ಗುರುಶಿಷ್ಯ ಸಂಬಂಧ"
61. "ಲಕ್ಷಣ ಶ್ಲೋಕಗಳು"
62. ಶ್ರೀರಮಣರ ಉಪದೇಶಸಾರ

## ವೇದಾಂತವಿದ್ವಾನ್ ಡಾ॥ ಕೆ. ಜಿ. ಸುಬ್ರಾಯಶರ್ಮಾರವರ ವೇದಾಂತ ಪ್ರವಚನಗಳು M.P.3 ಸಿ.ಡಿ.ಗಳಲ್ಲಿ ಲಭ್ಯವಿವೆ

1. ದಶೋಪನಿಷತ್ತುಗಳ ಸಂದೇಶಗಳು (10 ಗಂಟೆಗಳು)
2. ಬ್ರಹ್ಮಸೂತ್ರಶಾಂಕರಭಾಷ್ಯ, ಚತುಸ್ಸೂತ್ರೀಭಾಷ್ಯ (56 ಗಂಟೆಗಳು)
3. ಶ್ವೇತಾಶ್ವತರೋಪನಿಷತ್ ಶಾಂಕರಭಾಷ್ಯಂ (108 ಗಂಟೆಗಳು)
4. ಐತರೇಯೋಪನಿಷತ್ ಶಾಂಕರಭಾಷ್ಯಂ (48 ಗಂಟೆಗಳು)
5. ಈಶಾವಾಸ್ಯೋಪನಿಷತ್ ಶಾಂಕರಭಾಷ್ಯಂ (28 ಗಂಟೆಗಳು)
6. ಅಧ್ಯಾರೋಪ ಅಪವಾದಪ್ರಕ್ರಿಯೆ (90 ನಿಮಿಷಗಳು)
7. ನಮಗೆ ಇಂದು ವೇದಾಂತ ಬೇಕೇ? (90 ನಿಮಿಷಗಳು)
8. ಮುಂಡಕೋಪನಿಷತ್–ಶಾಂಕರಭಾಷ್ಯಮ್ (45 ಗಂಟೆಗಳು)
9. ಕಾಠಕೋಪನಿಷತ್–ಶಾಂಕರಭಾಷ್ಯಮ್ (69 ಗಂಟೆಗಳು)
10. ದ್ವಾದಶವೇದಾಂತರತ್ನಮಾಲಿಕಾ (13 ಗಂಟೆಗಳು)
    (12 ವೇದಾಂತ ಸಂದೇಶಗಳ ಪ್ರವಚನಗಳ ಸಂಗ್ರಹ)
11. ದಶೋಪನಿಷತ್ತುಗಳ ಪ್ರವಚನಗಳು (DVD 10 ಗಂಟೆಗಳು)
12. अध्यारोपापवादमहिमा (60 ನಿಮಿಷ)

* * * * * * *

---

**ವಿವರಗಳಿಗೆ ಮತ್ತು ಪ್ರತಿಗಳಿಗೆ ಲೇಖಕರಲ್ಲಿ ವಿಚಾರಿಸಿರಿ :**
**ವಿದ್ವಾನ್ ಡಾ॥ ಕೆ. ಜಿ. ಸುಬ್ರಾಯಶರ್ಮಾ, M.A., D.Litt.**
ನಂ. 127, "ಸೀತಾ-ಪ್ರೀತಿ", ಬಾಲಾಜಿ ನಗರ
ಐಸಿಐಸಿಐ ಬ್ಯಾಂಕ್ ಕ್ರಾಸ್ ರೋಡ್, ಉತ್ತರಹಳ್ಳಿ ಮುಖ್ಯರಸ್ತೆ
ಸುಬ್ರಹ್ಮಣ್ಯಪುರ ಪೋಸ್ಟ್, ಬೆಂಗಳೂರು-560 061.
**ದೂರವಾಣಿ : 080-2639 6786; ಮೊಬೈಲ್ : 98862 81622**




**“ವೇದಾಂತರತ್ನಾಕರ”** ಡಾ || ಕೆ. ಜಿ. ಸುಬ್ರಾಯಶರ್ಮಾರವರ **“ಗುರುಶಿಷ್ಯಸಂಬಂಧ”**–60 ಕೃತಿರತ್ನದ ಲೋಕಾರ್ಪಣಸಮಾರಂಭದಲ್ಲಿ ಸನ್ಮಾನ್ಯರಾದ ಗಣ್ಯ ಅತಿಥಿಗಳು; 18-4-2015, ಶನಿವಾರ




**“ವೇದಾಂತಪರುಷಮಣಿ”** ಡಾ || ಕೆ. ಜಿ. ಸುಬ್ರಾಯಶರ್ಮಾ ದಂಪತಿಗಳಿಗೆ, **“ಗುರುಶಿಷ್ಯಸಂಬಂಧ”**–60 ಕೃತಿರತ್ನದ ಲೋಕಾರ್ಪಣಸಮಾರಂಭದಲ್ಲಿ ಅಭಿಮಾನಿಗಳಿಂದ “ಗೌರವಸನ್ಮಾನ”; 18-4-2015, ಶನಿವಾರ

